# ವಿಷನಿಮಿಷಗಳು



ಹಿರೇಮಲ್ಲೂರ ಈಶ್ವರನ್



**ಕೆಳೆಯರ ಕೂಟ, ಬ್ಯಾಡಿಗಿ.**

೧೯೬೭

## ತಾಯಿ ಕೊಟ್ಟ ಹರಕೆ

ಎರೆಯ ಹೊಲದಾಗ ಎಳೆಯ ಸವತೆ ಕಾಯಿ
ಹರಿಯಂದರ್ಯಾಂಗ ಹರಿಯಲಿ। ನನ ಕಂದ
ಮುರೆಯಂದರ್ಯಾಂಗ ಮುರೆಯಲಿ

ಸಕ್ಕರೆಯಂತ ಜೀವ ಸಿಕ್ಕ್ಯಾವ ಬಲೆಯಾಗ
ಉಚ್ಚ್ಯ ಗಂಟಿಲ್ಲ ಮಲಕಿಲ್ಲ। ಕಂದಮ್ಮ
ಸಿಕ್ಕ್ಯಾವ ಶಿವನ ಬಲೆಯಾಗ

# ಮುನ್ನುಡಿ

ಮಲ್ಲೇಶ್ವರಂ, ಬೆಂಗಳೂರು.
೨೮-೨-೪೬

**ಪ್ರಿಯ ಈಶ್ವರನ್,**

ಭಾರತ ಯುದ್ಧಾನಂತರದಲ್ಲಿ ಏಕಾಕಿಯಾದ ಸುಯೋಧನ ತನಗೆ ಪರಮ ಆಪ್ತನಾದ ಕರ್ಣನ ಸಾವನ್ನು ತಿಳಿದು ಆತನಿಗೂ ತನಗೂ ವಿಯೋಗವಾಯಿತೆಂಬುದನ್ನು ನಂಬಲಾರದೆ "ನಯನದೊಳಂ ಎರ್ದೆಯೊಳಂ ನಿನ್ನಯ ರೂಪಿರ್ದಪುದು, ನಿನ್ನ ಮಾತಿರ್ದಪುದು ಎನ್ನಯ ಕಿವಿಯೊಳಗೆ. ವಿಯೋಗಮೆಂತಾದುದಯ್ಯ ಎನಗಂ ನಿನಗಂ!" ಎಂದನಂತೆ. ಭೂಮಿ ತಾಯಿಯ ಮಡಲಿನಲ್ಲಿ ಮಲಗಿದ ಶಿವು, ಸಿದ್ದು, ಶಂಕರ, ಶೇಖರ, ಪಾರ್ವತಿ ಇವರೊಡನೆ ನಿಮ್ಮ ಮನಸ್ಸು ವಿಹರಿಸುವುದನ್ನು ಓದಿ, ನನಗೆ ಸುಯೋಧನನ ಮಾತು ನೆನಪಿಗೆ ಬಂತು; 'ಸತ್ತವರ ಸಂಗದಲಿ ಹೊತ್ತು ಹೋಗುವುದೆನಗೆ' ಎಂದು ಸದೆ ಕವಿ ಹಾಡಿದ್ದು ಜ್ಞಾಪಕ ಬಂತು.

ಸುಮಾರು ನಾಲ್ಕು ತಿಂಗಳ ಹಿಂದೆ, ಒಂದು ಸಂಜೆ, ಬೆಳಗಾಂ ರೈಲ್ವೆ ನಿಲ್ದಾಣದಲ್ಲಿ ನನ್ನನ್ನು ಬೀಳ್ಕೊಟ್ಟ ಬಳಿಕ, ಮರುದಿವಸ ಮುಂಬಯಿ ಮುಟ್ಟುವ ವೇಳೆಗೆ ನೀವು ಕೊಟ್ಟಿದ್ದ 'ವಿಷನಿಮಿಷ'ಗಳ ಹಸ್ತ ಪ್ರತಿಯನ್ನು ಎರಡು ಸಲ ಓದಿದೆ. ಬರವಣಿಗೆ ಸೀಯಾಳದಷ್ಟು ಸರಳ. ಆಡಂಬರವಿಲ್ಲ, ಉದ್ರೇಕವಿಲ್ಲ, ಅಬ್ಬರವಿಲ್ಲ, ಕೃತಕತೆಯಿಲ್ಲ. ಹೊಸತನ ತೋರಿಸಬೇಕೆಂಬ ಹುಚ್ಚು ಹೊಳೆಯ ಹೆಸರಿನಲ್ಲಿ ಈಚೀಚೆಗೆ ತೇಲಿ ಬರುತ್ತಿರುವ ಕಶ್ಮಲದ ಕಣ ಒಂದಿಷ್ಟಿಲ್ಲ. ಮಾತುಗಳ ಮಿತಗಮನ ವಸ್ತುವಿಗೆ ತಕ್ಕಂತೆ,

ಮಕ್ಕಳ ನಡೆಯಂತೆ, ಸಹಜ. ಅಂಥ ಮಿಂಚು, ಗುಡುಗು, ಮಳೆ, ಆಲಿಕಲ್ಲು ಇಲ್ಲದಿದ್ದರೂ 'ಕಂಠ ಸ್ತಂಭಿತ' ವಾದ ಕಣ್ಣಿನ ತೀವ ಉದ್ವಕ್ಕೂ ಹೃದಯ ಸ್ಪರ್ಶಿಯಾಗಿದೆ.

ಇಂಥ ಮೂವತ್ತು ಚಿತ್ರಗಳ ಈ ಕಟ್ಟನ್ನು "ವಿಷನಿಮಿಷಗಳು" ಎಂದು ನೀವು ಏಕೆ ಕರೆಯುತ್ತೀರೊ! ನಿಜ, ಇಷ್ಟರನ್ನು ತೊರೆದುಕೊಂಡ ನಿಮಿಷ 'ವಿಷನಿಮಿಷ' ವೆನ್ನಿಸಿಕೊಳ್ಳುವುದು ಯುಕ್ತವಾದರೂ, ನೀವು ಪ್ರತಿ ಚಿತ್ರದಲ್ಲೂ ಚಿತ್ರಿಸಿರುವುದು ಅವರಿಗೂ ನಿಮಗೂ ಆದ ವಿಯೋಗ ಕ್ಕಿಂತ ಅವರಿಗೂ ನಿಮಗೂ ಇದ್ದ ಸಂಯೋಗವನ್ನಲ್ಲವೇ? ಈ ಸಂಯೋಗದ ಮುಖ್ಯ ಶರೀರಕ್ಕೆ ವಿಯೋಗದ ದುಃಖ ಕಡೆಯ ಕುಚ್ಚಿನಂತೆ ಬರುವ ದಿಲ್ಲವೇ? ಆದ ಕಾರಣ, ಈ ಹೆಸರಿಗಿಂತ, ನಿಮ್ಮ ಚಿತ್ರಗಳಲ್ಲೇ ಒಂದಕ್ಕೆ ನೀವು ಕೊಟ್ಟಿರುವ "ಮಕ್ಕಳ ಲೋಕ" ಎಂಬುದು ಹೆಚ್ಚು ಒಪ್ಪುವುದೆಂದು ನನ್ನ ಎಣಿಕೆ. ನಿಮ್ಮ ಒಡಹುಟ್ಟಿದವರು ಮಾತ್ರವೇ ಈ 'ಮಕ್ಕಳ ಲೋಕ'ದ ಪ್ರಜೆಗಳಲ್ಲ; ಕುಂಬಾರ ಮಲ್ಲಪ್ಪ, ಅವನಾಕೆ ಮಲ್ಲಮ್ಮ, ಹಾಲು ಮಾರುವ ಚಂದ್ರಕ್ಕ, ನೀವು ಕಡೆಯ ನಮಸ್ಕಾರ ಮಾಡಿದ ತಾಯಿ, ಸಿದ್ಧನನ್ನು ಬಿಟ್ಟು ಬದುಕವೊಲ್ಲದ ಚೆಲುವಿ—ಇವರೆಲ್ಲ ಈ 'ಮಕ್ಕಳ ಲೋಕ'ದ ಪ್ರಜೆಗಳೇ. ಇವರೆಲ್ಲರ ಮನಸ್ಸು, ಮಾತು, ಮೆಯ್ಮೆ ಮಕ್ಕಳಂತೆಯೇ ಮುಗ್ಧವಾದುವು. ಇಂಥವರನ್ನೆಲ್ಲ "ವಿಷ-ಜ" ಎಂದು ಪರುಷವಾಗಿ ನಾಮಕರಣ ಮಾಡುವದಕ್ಕಿಂತ "ಬಿಸ-ಜ" ಎಂದು ಕರೆದರೆ ಎರಡು ಅರ್ಥ ಸಾಧಿತವಾಗಲಿಲ್ಲವೆ? ನೋಡಿ.

ಪುಸ್ತಕದ ಒಳಪಿಡಿ ಎಷ್ಟು ಅರ್ಥಪೂರ್ಣವೋ ಮೊತ್ತದ ಹೆಸರೂ ಅಷ್ಟೇ ಅರ್ಥ. ನಿಮ್ಮ "ವಿಷನಿಮಿಷ"ಗಳು ಶ್ರೀ. ಗೋಕಾಕರ "ರಸ ನಿಮಿಷ" ಗಳ ವಿಡಂಬನೆಯೆಂಬ ತಪ್ಪು ಕಲ್ಪನೆಗೆ ಅವಕಾಶವಿರದಿರಲಿ. ಎಂದರೆ, ವಿಡಂಬನೆಗಳು ಆಗಬಾರದೆಂದಲ್ಲ; ವಿಡಂಬನೆಯಲ್ಲದುದಕ್ಕೆ ವಿಡಂಬನೆಯೋ ಎಂಬ ಶಂಕೆ ಸೋಕುವುದು ಬೇಡ, ಎಂದಷ್ಟೆ.

ನಮಗೆ ಆಪ್ತರೂ ಇಷ್ಟರೂ ಆದವರನ್ನು ನೆನೆದು. ಈ ಚಿತ್ರಗಳಲ್ಲಿ ಕಂಡು ಬರುವಂತೆ, ಜೀವ ತುಡಿದುಕೊಳ್ಳುವುದು ಜೀವದ ಚೈತನ್ಯದ ಲಕ್ಷಣ—ಎಂದು ಹಿರಿಯರು ಹೇಳಿದ್ದಾರೆ. ಅಂತೆಯೇ ಈ ಚೈತನ್ಯದ ಚರಮ ಸ್ವರೂಪವನ್ನು ಮಹರ್ಷಿಗಳು ತಿಳಿಸಿದ್ದಾರೆ. ಭಗವಂತನಾದ ಬುದ್ಧನು "**ಸಬ್ಬ ಭೂತೇಸು ಮಾನಸಂ ಭಾವಯೇ ಅಪರಿಮಾಣಂ**" ಎಂದರೆ. "ವಿಶ್ವದಲ್ಲಿರುವ ಸರ್ವ ಭೂತಗಳಲ್ಲಿಯೂ ಅನುಕಂಪದಿಂದ ತುಡಿದುಕೊಳ್ಳುವಂತೆ ಮನಸ್ಸನ್ನು ಅಪರಿಮಿತವಾಗಿ ಬೆಳೆಸಿರಿ" ಎಂದು ಹೇಳಿದನು. ಈ ಬೆಳವಣಿಗೆಯ ಮಾರ್ಗದಲ್ಲಿ ಈ ಚಿತ್ರಗಳಲ್ಲಿ ಕಂಡು ಬರುವ ಮನಸ್ಸಿನ ವಿಲಾಸವೂ ಒಂದು ಹೆಜ್ಜೆ. ಇದು ಹೀಗೇ ಅಪರಿಮಿತವಾಗಿ ಬೆಳೆಯಲಿ. ಅದರಿಂದ ಇನ್ನೂ ಉತ್ತರವಾದ, ಉತ್ತಮವಾದ ಕೃತಿಗಳು ನಿಮ್ಮಿಂದ ಬರಲಿ.

ನಿಮ್ಮವ,

ಜಿ. ಪಿ. ರಾಜರತ್ನಂ.

# ನನ್ನ ನುಡಿ

**ಗೆಳೆಯು,**

ನನ್ನ ಬಾಳಿನ ಹೊತ್ತಿಗೆಯ ಪುಟಗಳನ್ನು ವಿಶ್ವಾಸಪೂರ್ವಕವಾಗಿ ನಿನ್ನೆದುರಿನಲ್ಲಿ ತಿರುವಿ ಹಾಕುತ್ತಿದ್ದೇನೆ. ಬಾಳು ಕಂಬನಿಯ ಹೊನಲೆ, ಆನಂದದ ಆಗರವೆ ಎಂಬುದನ್ನು ಈ ವಿಷನಿಮಿಷಗಳನ್ನು ಓದಿ ನಿರ್ಧರಿಸಲು ಹೋಗಬೇಡ. ಸೃಷ್ಟಿಯೆ ಅರಿವಿನ ರಹಸ್ಯವನ್ನು ಬೀರುವ ಒಂದು ಉದ್ಗ್ರಂಥ. ಓದುಗನ ಜೀವನ ಮಟ್ಟಕ್ಕನುಗುಣವಾಗಿ ಅದು ಅರ್ಥ ಹೇಳಿ ಕೊಡುತ್ತದೆ. ಆಗ ಜೀವನವು ಪ್ರತಿಯೊಬ್ಬನಿಗೆ ವಿವಿಧ ರೂಪಾಗಿ ತೋರುವದು. ನನ್ನ ಜೀವನ ನೋಟ ನನಗೆ. ನಿನ್ನದು ನಿನಗೆ. ಆದರೆ ಇಷ್ಟು ಮಾತ್ರ ಸತ್ಯ. ನನ್ನ ದುಃಖದ ಕಥೆಯನ್ನು ನಿನಗೆ ಹೇಳುವಲ್ಲಿ, ನಿನ್ನ ದುಃಖದ ಕಥೆಯನ್ನು ನಾನು ಕೇಳುವಲ್ಲಿ ಇಬ್ಬರಿಗೂ ಒಂದೇ ಅನುಭವ ವಾಗುತ್ತದೆ. ಅಡವಿಯುಲ್ಲಾಗಲಿ ಅರಮನೆಯುಲ್ಲಾಗಲಿ ನಟ್ಟ ಮುಳ್ಳು ಎಷ್ಟು ಕಿರಿದಾದರೇನು? ನೋವು ಸಣ್ಣದೇ? ಆ ನೋವನುಂಡವರಿಗೆಲ್ಲ ಒಂದೇ ಅನುಭವ. ಅಂತಹ ಅನುಭವ ದೃಷ್ಟಿಯನ್ನು ತಳೆದು ಈ ವಿಷ ನಿಮಿಷಗಳನ್ನು ಓದಿ ನೋಡು

ಇವುಗಳನ್ನು ಓದಿ 'ಆಂತರಿಕ ಜೀವನದ ಏರಿಳಿತಗಳನ್ನು ಇಷ್ಟೇಕೆ ತರಬೇಕಿತ್ತು?' ಎಂದು ನೀನು ಅಂದುಕೊಂಡೀ. ಅದಕ್ಕೆ ನನ್ನದೊಂದು ಮಾತು. ಸಾಹಿತ್ಯ ಜೀವನದ ಸಮಸ್ಯೆಗಳ ಕೈಗನ್ನಡಿ ಎಂಬುದನ್ನು ನೀನು ಮರೆಯಬೇಡ. ರಾಮಾಯಣ, ಮಹಾಭಾರತಗಳನ್ನು ನಾವು ಅಷ್ಟೇಕೆ ಆಸ್ಥೆಯಿಂದ ಓದುತ್ತೇವೆ, ಬಲ್ಲೆಯಾ? ಶ್ರೀರಾಮನು ನಮ್ಮಂತೆಯೆ ಒಬ್ಬ ಮಾನವ. ನಮ್ಮ ಹಾಗೆಯೆ ಆತನೂ ಜೀವನದಲ್ಲಿ ಉಬ್ಬರ ಇಳಿತಗಳನ್ನು ಕಂಡ. ಆದರೆ ಸೀತೆಯನ್ನು ಕಳೆದುಕೊಂಡ ರಾಮ, ರಾಮನನ್ನು ಕಳೆದು

ಕೊಂಡ ಸೀತೆ ಹಲುಬುವಾಗ ನಾವೇಕೆ ಕಣ್ಣೀರಿಡುತ್ತೇವೆ? ಒಡ ಹುಟ್ಟಿದವರನ್ನು ಕಳೆದುಕೊಂಡ ಕೌರವರಾಜ ತನ್ನ ಅರಸತ್ತಿಗೆಯನ್ನು ಮರೆತು ಬಿಟ್ಟು ಮಸಣದಲ್ಲಿ ಕುಸಿ ಕುಸಿದು ನಡೆಯುವಾಗ ನಾವೇಕೆ ಮರಗುತ್ತೇವೆ? ಅದು ಮಾನವ ಸ್ವಭಾವ. ಇತರರ ನೋವು ನಲಿವುಗಳನ್ನು ನೋಡಿ ನಮ್ಮಲ್ಲಿ ಮರುಕ ಉತ್ಸಾಹ ಹುಟ್ಟುವದು ಆಂತರಿಕ ಜೀವನದ ಭಾಂದವ್ಯವನ್ನು ತೋರಿಸುತ್ತದೆ. ಸಾಹಿತ್ಯವೂ ಇದೇ ಕಾರ್ಯವನ್ನು ಮಾಡುತ್ತದೆ. ಜೀವನದ ಸತ್ಯ, ಕಾವ್ಯದ ಸತ್ಯ ಎರಡೂ ಬೇರೆಯಲ್ಲ, ಒಂದೇ. ಕವಡು ನಟನೆಗೆ ಇಲ್ಲಿ ಎಡೆಯಿಲ್ಲ. ನಕ್ಷೆಗಾರ ಮಾಡಿದ ಕಾಗದ ಗುಲಾಬಿ, ವಿಶ್ವಕರ್ಮ ಸೃಜಿಸಿದ ಚೆಂಗುಲಾಬಿ ಎರಡೂ ಒಂದೇ ಎಂದು ಹೇಳಲಾದೀತೆ? ನನ್ನ ಈ ವಿಶ್ವಾಸದ ಮಾತುಗಳನ್ನು ನೆನೆದುಕೊಂಡು ನಿನ್ನ ಪ್ರಶ್ನೆಯನ್ನು ತೂಗಿ ತೂಗಿ ನೋಡು.

ಈ ವಿಷನಿಮಿಷಗಳ 'ಜಾತಿ ಕರ್ಮ'ದಿಗಳನ್ನು ಕುರಿತು ನೀನು ಕೆಲವೊಂದು ವಿಚಾರ ಊಹಿಸುವ ಮುನ್ನವೆ ನಾನು ಒಂದೆರಡು ಮಾತು ಹೇಳಬೇಕಾಗಿದೆ ನಿನ್ನ ಸಂದೇಹ ನಿವಾರಣೆಗೆ ಅವು ಕಾರಣವಾಗಲೂ ಬಹುದು. ಪ್ರತಿಯೊಂದು ವಿಷನಿಮಿಷದ ತಲೆಬರಹ, ಬೆಳವಣಿಗೆ, ಯೋಗ್ಯವಾಗಿದೆಯೆ? ಹೊತ್ತಿಗೆಯ ಹೆಸರು 'ವಿಷನಿಮಿಷಗಳು' ಎಂದಿರುವದು ಸರಿಯೆ? ಒಬ್ಬ ತಮ್ಮನ ಅಗಲುವಿಕೆಯಿಂದ ಹದಿನಾರು ವಿಷನಿಮಿಷಗಳು ಬಂದಿರುವಾಗ ಉಳಿದವರ ಬಗ್ಗೆ ಇನ್ನೂ ಹೆಚ್ಚಿಗೇಕೆ ಬರಲಿಲ್ಲ? ಇವುಗಳಿಗೆ ಉತ್ತರ ಇಷ್ಟು ಮಾತ್ರ ಹೇಳಬಲ್ಲೆ.

ವಿಷನಿಮಿಷಗಳನ್ನು ಒಂದೇ ಬಾರಿಗೆ ಕುಳಿತು ಬರೆದು ಹಾಕಿಲ್ಲ. ಗುಳ್ಳೆ ಒಂದನ್ನೊಂದು ಹಿಂಬಾಲಿಸಿ ತುಸು ದೂರ ಹೋಗುವಷ್ಟರಲ್ಲಿ ಒಡೆದು ಹೋಗುವಂತೆ ಒಡಹುಟ್ಟಿದವರು ಒಬ್ಬೊಬ್ಬರೆ ಹೊರಟು ಹೋದರು. ಪಾರ್ವತಿ, ಸಿದ್ದು, ಶಂಕರ, ಶೇಖರ, ಶಿವು, ಇನ್ನೊಬ್ಬಾಕೆ ಹುಟ್ಟಿದೊಡನೆಯೆ ಮಣ್ಣಿಗೆ ಮರಳಿದ ತಂಗಿ—ಎಲ್ಲರೂ ತಿರುಗದ ದಾರಿ ಹಿಡಿದು ಹೋದರು. ಪಾರ್ವತಿ ಎಂಟು ವರುಷದವಳಿದ್ದಾಗ, ಶಂಕರ, ಸಿದ್ದ

ಐದಾರು ವಯಸ್ಸಿನಲ್ಲಿದ್ದಾಗ, ಶೇಖರ ಆಗ ತಾನೆ ತಾಯ ಹಾಲು ನಿಲ್ಲಿಸಿದಾಗ ಸಾವಿನ ತೆಪ್ಪ ಏರಿ ಹೋದರು. ಒಂದು ಗಾಯದ ಮೇಲೆ ಇನ್ನೊಂದು ಗಾಯ. ಯಮ ಕೊಟ್ಟ ಇಷ್ಟೊಂದು ಯಾತನೆಯನ್ನು ಸಹಿಸುತ್ತಿರುವಾಗಲೆ ಹದಿನಾರು ವರುಷದ ತಮ್ಮ ಶಿವು ಆಟವಾಡುತ್ತಲೆ ಹೋಗಿಬಿಟ್ಟ. ಮಂಚದ ಮೇಲೆ ಮಂಜಿನ ಮುದ್ದೆಯಾಗಿ ಮಲಗಿದ್ದ ಅವನನ್ನು ನೀನು ನೋಡಿದ್ದರೆ ........! ಹದಿನಾರು ವರುಷದ ಒಡನಾಡಿತನ! ಮರೆಯಬೇಕಾದರೆ ಹದಿನಾರು ಮಳೆಗಾಲವೆ ದಾಟಿ ಹೋಗಬೇಕು. ಅವನ ಬಗ್ಗೆ ಹದಿನಾರು ವಿಷನಿಮಿಷಗಳು ಮೂಡಿ ಬಂದಿದ್ದರೆ ಅವರಲ್ಲೇನು ದೋಷ ಆದೀತು ?

ಶೇಖರನನ್ನು ಕುರಿತು ಬರೆದ 'ದರ್ಶನ' ನೋಡು. ಅಂತಹದೆ ಒಂದು ಸನ್ನಿವೇಶವನ್ನು ನೀನು ಇನ್ನೆಲ್ಲಿಯಾದರೂ ಓದಿದ್ದೀಯೇನು ? ಪೂಜ್ಯ ಗಾಂಧೀಜಿಯವರ 'ಆತ್ಮಕಥೆ'ಯ ಮೊದಲ ಪುಟ ತೆರೆದು ನೋಡು. ಆ ಕತೆಯ ಹೋಲಿಕೆಯನ್ನು 'ದರ್ಶನ'ದಲ್ಲಿ ಕಾಣುವಿ. ಅದನ್ನೋದುತ್ತ ಕುಳಿತಂದು ಕಂಬನಿ ಊರಿ ಬಂದು ವಿಷನಿಮಿಷಕ್ಕೆಡೆ ಮಾಡಿಕೊಟ್ಟಿತು. ಪುತಳೀಬಾಯಿಯವರಲ್ಲಿ ನನ್ನ ತಾಯ್ತನವನ್ನು ಕಂಡಂದು ಎನಿತು ಸಂತಸವಾಯಿತೆಂಬುದನ್ನು ಊಹಿಸಬಲ್ಲೆಯಾ ? ಆಗದು. ನಿನ್ನ ಊಹೆಯ ಮೇರೆಯನ್ನು ಮೀರಿ ನಿಂತಿದೆ, ನನ್ನ ಆನಂದ. ಶೇಖರನ ಬಗ್ಗೆ ಇಷ್ಟಾಯಿತು. ಆ ತೊಟ್ಟಿಲ ಕೂಸಿನ ಅಗಲುವಿಕೆಯಿಂದ ತಾಯಿಗೆ ಉಂಟಾದಷ್ಟು ನೋವು ನನಗಾಗಲಿಲ್ಲ. ಅದರಲ್ಲೂ ಹುಟ್ಟಿದೊಡನೆ ತೀರಿ ಹೋದ ಕೂಸಿನ ಮರಣದಿಂದ ಆದ ವೇದನೆ ಇನ್ನೂ ಕಡಮೆ. ಆದರೆ ತಾಯ ಕರುಳು ಮುರಿಗೆಗೊಂಡುದು ಅಷ್ಟಿಷ್ಟಲ್ಲ !

ಬಾನು ಕಣ್ಣೀರು ಹಾಕುವಾಗ ಅಲ್ಲೊಂದು ಇಲ್ಲೊಂದು ಕೋಲ್ಮಿಂಚು ಸೆಳೆ ಸೆಳೆದು ಹೋಗುತ್ತದೆ, ನೋಡಿದೀಯ ? ಆ ಮಿಂಚಿನಂತೆ ಈ ವಿಷ ನಿಮಿಷಗಳು ಮೂಡಿ ಬಂದಿವೆ. ಅಂತಹ ಪ್ರತಿ ವಿಷನಿಮಿಷವೂ ನನಗೆ ವಿಷದ ತೊಟ್ಟು. ಆ ತೊಟ್ಟು ತೋಯಿಸುವ ರೀತಿಗೆ ನಾನು ಗಮನ ಕೊಟ್ಟಿಲ್ಲ. ಅದರ ಪರಿಣಾಮವೊಂದನ್ನೆ ಕಣ್ಮುಂದಿಟ್ಟುಕೊಂಡಿದೇನೆ.

ವಿಷನಿಮಿಷದ ತಲೆಕಟ್ಟು ಕೊನೆಯ ವಾಕ್ಯವೊ, ಸಂದರ್ಭ ಸೂಚಕವೊ ಆಗಿರಬಹುದು. ಇನ್ನೇನು ಹೆಚ್ಚಿಗೆ? ಅಲ್ಲೊಂದು ಇಲ್ಲೊಂದು ವಾಕ್ಯ, ಶಬ್ದ ತಿರುತಿರುಗಿ ಬಂದಿದ್ದರೆ ಅವನ್ನು ನಿನ್ನ ವಿಶಾಲ ಹೃದಯದಲ್ಲಿ ಅಡಗಿಸಿ ಕೊಂಡು ಬಿಡು.

ಇನ್ನೊಂದು ಮಾತು. ಶಾರದಾದೇವಿಗೆ ಸುಹೃದಯನಾದವನು ಸಲ್ಲಿಸತಕ್ಕ ಸೇವೆ ಬಹು ದೊಡ್ಡದು. ಅವಳ ಮಂದಿರದಲ್ಲಿ ಅವನಿಗೆ ಸನ್ಮಾನ್ಯ ವಾದ ಸ್ಥಾನವಿದೆ. ಅವನ ಒಂದೊಂದು ನುಡಿ ಅಮೃತ ಮಂತ್ರವಾಗ ಬಲ್ಲುದು. ಬೆಳೆಯುವ ಸಸಿಗೆ ಹೊಯ್ ನೀರು, ಮಳೆ ನೀರು ಎರಡೂ ಬೇಕು. ಈ ಮಾತು ವಿಚಾರ ಮಾಡಿ ನೋಡು. ನಮ್ಮ ಜನ ಇನ್ನೂ ಸುಹೃದಯನ ಮಹೋನ್ನತಿಯನ್ನು ಅರಿತುಕೊಂಡಿಲ್ಲ. ಒಮ್ಮುಖವಾದ ಹೊಗಳಿಕೆ, ಒಮ್ಮುಖವಾದ ನಿಂದೆ ಇವೇ ಈಗಿನ ವಿಮರ್ಶೆಯ ಲಕ್ಷಣ ಗಳಾಗಿ ನಿಂತಿವೆ. ಇಂತಹದರಿಂದ ಯಾವ ಕೆಲಸ ತಾನೆ ಆದೀತು? ಕೈಯಲ್ಲಿ ಲೇಖನಿ ಹಿಡಿದು ಗೀಚುತ್ತ ಕುಳಿತರೆ ಅದರಲ್ಲಿ ಸಾಹಿತ್ಯದೇವಿ ಮೂಡಿ ಬಂದಾಳೆ? ಪ್ರಸನ್ನಚಿತ್ತ ಅವಶ್ಯವಾಗಿ ಬೇಕು, ಆ ತಾಯಿಯನ್ನು ಒಲಿಸುವು ದಕ್ಕೆ. ಈ ವಿಷನಿಮಿಷಗಳನ್ನು ಓದಿ ನೋಡುವ ನಿನಗೂ ಇದೇ ನನ್ನ ಮಾತು. ಇವುಗಳನ್ನು ಓದುವಂದು ತಾಳ್ಮೆಯಿರಲಿ; ಸುಹೃದಯ ಭಾವ ಇರಲಿ.

ಶ್ರೀ. ಜಿ. ಪಿ. ರಾಜರತ್ನಂ ಅವರು ನನ್ನ ಬಿನ್ನಹಕ್ಕೆ 'ಓ' ಗೊಟ್ಟು ವಿಷನಿಮಿಷಗಳಿಗೆ ಮುನ್ನುಡಿ ಬರೆದು ಕೊಟ್ಟಿದ್ದಾರೆ. 'ಬಿನ್ನಹಕೆ ಬಾಯಿಲ್ಲ ವಯ್ಯ' ಎಂದು ಹೇಳಿದ ಋಷಿವರರ ಮಾತು ಹೇಗೆ ಸುಳ್ಳಾದೀತು? ನಮ್ಮೂರ ಸುಡುಗಾಡದ ಮಣ್ಣು, ನನ್ನ ಕಂಬನಿ ಇವುಗಳನ್ನು ಮಿದ್ದಿ ಕಟ್ಟಿದ ಗುಡಿಗೆ 'ರತ್ನ' ರು ಕೊಟ್ಟುದು ಬರೀ 'ಮುನ್ನುಡಿ' ಯಲ್ಲ; ರತ್ನದ ಗೋಪುರ ಅದು! ಮಿಂಚಿಸೆವ ಆ ಗೋಪುರದ ಹೊಂಬೆಳಕಿನಲ್ಲಿ ನಿಂತುಕೊಂಡವರಿಗೆಲ್ಲ 'ವಿಷನಿಮಿಷಗಳ' ಪರಿಚಯ ಸಹಜವಾಗಿ ಆದೀತೆಂದು ನಂಬಿದ್ದೇನೆ.

ಶ್ರೀ. ಶಿ. ಶಿ. ಬಸವನಾಳ ಅವರು ಎಲೆಯ ಮರೆಯ ಮೊಗ್ಗೆಯಂತಿದ್ದ ಲೇಖಕನನ್ನು ಮುಂದಕ್ಕೆ ಕರೆದು ತಂದಿದ್ದಾರೆ. ಮೊಗ್ಗೆ ಅರಳಿದರೆ ಅವರಿಗೆ ಅರ್ಪಿತ.

ಕಲಾವಿದ ರಾಘವೇಂದ್ರರಾಯರು ಈ ಪುಸ್ತಕದ ಬಾಹ್ಯ ಸೌಂದರ್ಯ ವನ್ನು ಹೆಚ್ಚಿಸಿದ್ದಾರೆ. ನಾನು ಕರೆದಾಗಲೆಲ್ಲ ಮೌನದಿಂದ ಉತ್ತರ ಕೊಟ್ಟ ರಾಘವೇಂದ್ರರಿಗೆ ವಂದನೆ.

ಈ ಹೊತ್ತಗೆಯಲ್ಲಿಯ ಅನೇಕ ಬರಹಗಳು ಈಗಾಗಲೆ ಪ್ರಸಿದ್ಧ ಕನ್ನಡ ಪತ್ರಿಕೆಗಳಲ್ಲಿ ಬಂದು ಬಿಟ್ಟಿವೆ. ಧಾರವಾಡದ 'ಜಯಕರ್ನಾಟಕ', ಬೆಂಗಳೂರಿನ 'ಉಷಾ', ಅದೇ ಊರಿನ 'ಜೀವನ', ರಬಕವಿಯ 'ಪ್ರಗತಿ' ಮತ್ತು ಬೆಳಗಾವಿಯ ಕಿರಿಯರ ಬಳಗದವರ ಪ್ರಕಟನೆ 'ತಿರುಗಣಿ'— ಇವುಗಳಲ್ಲಿ ಈ ಬರಹಗಳು ಅಚ್ಚಾಗಿವೆ. ಇವುಗಳನ್ನು ವಿಶ್ವಾಸದಿಂದ ಎತ್ತಿ ಕೊಂಡು ಪ್ರಕಟಿಸಿದ ಸಂಪಾದಕರಿಗೆ ನನ್ನ ವಂದನೆಗಳು. ಅವರು ತೋರಿ ಸಿದ ಪ್ರೇಮಕ್ಕೆ ಮೌನವೆ ಮಹಾ ಸ್ತುತಿ.

ಮೂರು ವರುಷಗಳ ಹಿಂದೆಯೆ ಈ ಪುಸ್ತಕ ಪ್ರಕಟವಾಗಬೇಕಿತ್ತು. ಆಗಲಿಲ್ಲ. ಇಂದು ಬ್ಯಾಡಗಿಯ 'ಕೆಳೆಯರ ಕೂಟ' ದವರು ಇದನ್ನು ಬಯಲಿಗೆ ತರುತ್ತಿದ್ದಾರೆ. ಪ್ರಕಟನಾ ಕಾರ್ಯದಲ್ಲಿ ನೆರವಾದ ಗೆಳೆಯರ ಗುಂಪಿನವರಿಗೂ, ಗೆ. ಚಂದ್ರಶೇಖರ ಅವರಿಗೂ ನನ್ನ ಹೃತ್ಪೂರ್ವಕ ವಂದನೆಗಳು. ವಿಷನಿಮಿಷಗಳನ್ನು ಓದಿಸಿ ಮೆಚ್ಚಿದ ಗೆಳೆಯರನ್ನೆಲ್ಲ ನಾನು ಈಗ ನೆನೆಯ ಬೇಕು. ಏಕೆಂದರೆ ಅವರ ಒಲುಮೆಯೆ ನನಗೆ ಅಕ್ಷಯ ನಿಧಿ.

"**ಶಾಂತಿ**"
ಹಿರೇಮಲ್ಲೂರು.
ರಾಮನವಮಿ, ಎಪ್ರಿಲ್ ೧೯೪೭

**ಹಿರೇಮಲ್ಲೂರ ಈಶ್ವರನ್.**

# ವಿಜ್ಞಾಪನೆ

ಐದು ವರುಷಗಳ ಹಿಂದೆ, ವಿಜಯ ದಶಮಿಯ ಸುಮುಹೂರ್ತದಲ್ಲಿ 'ಕೆಳೆಯರ ಕೂಟ' ಹುಟ್ಟಿತು. ಕನ್ನಡ ವಾಙ್ಮಯ ಪ್ರಸಾರ, ಕರ್ನಾಟಕದ ಸರ್ವಾಂಗ ಸುಂದರ ಉತ್ಕರ್ಷ—ಇದುವೆ ಸಂಘ ಇಟ್ಟುಕೊಂಡ ಧ್ಯೇಯ.

ನಮ್ಮ ಅನೇಕ ಚಟುವಟಿಕೆಗಳಲ್ಲಿ ಗ್ರಂಥ ಪ್ರಕಟನೆಯ ಕಾರ್ಯವೂ ಒಂದು. ಹಣ ಸಂಪಾದನೆಗಾಗಿ ನಾವಿದನ್ನು ಕೈಕೊಂಡಿಲ್ಲ. ಕನ್ನಡ ನುಡಿ ದೇವಿಗೆ 'ಅಳಿಲು ಸೇವೆ' ಸಲ್ಲಿಸಲೆಂದು ಈ ಕಾರ್ಯ ಹೂಡಿದ್ದೇವೆ. ಇಷ್ಟೊತ್ತಿಗೆ ನಮ್ಮ ಗ್ರಂಥ ಮಾಲೆಯಲ್ಲಿ ಗೆಳೆಯರ ಅನೇಕ ಪುಸ್ತಕಗಳು ಅಚ್ಚಾಗಬೇಕಿತ್ತು. ಆದರೆ ವಿಶ್ವಮೋಘದಿಂದುಂಟಾದ ಅನಾನುಕೂಲತೆಯಿಂದ, ಕಾಗದದ ತುಟಾಗ್ರತೆಯಿಂದ ನಮ್ಮ ಗುರಿ ಸಾಧಿಸಲಿಲ್ಲ.

ಶ್ರೀ. ಹಿರೇಮಲ್ಲೂರ ಈಶ್ವರನ್, ಬಿ. ಎ, (ಆನರ್ಸ) ಅವರು ನಮ್ಮ ಗ್ರಂಥಮಾಲೆಯಲ್ಲಿ 'ವಿಷನಿಮಿಷಗಳ' ನ್ನು ಪ್ರಕಟಿಸಲು ಅನುಮತಿಯಿತ್ತುದಕ್ಕಾಗಿ ನಾವು ತುಂಬ ಋಣಿಯಾಗಿದ್ದೇವೆ. ಮುನ್ನುಡಿ ಬರೆದುಕೊಟ್ಟ ಮಾ್ಯ ಜಿ. ಪಿ. ರಾಜರತ್ನಂ, ಎಂ. ಎ. ಅವರಿಗೂ, ಮುಖಚಿತ್ರ ತೆಗೆದು ಕೊಟ್ಟಕಲಾವಿದ ರಾಘವೇಂದ್ರರಾಯರಿಗೂ ನಮ್ಮ ಸಂಘವು ಕೃತಜ್ಞತೆಗಳ ಸ್ಮರಿಸುತ್ತದೆ.

ಗ್ರಂಥವನ್ನು ಅಚ್ಚುಕಟ್ಟಾಗಿ ವೇಳೆಗೆ ಸರಿಯಾಗಿ ಅಂದವಾಗಿ ಮುದ್ರಿಸಿ ಕೊಟ್ಟ ಬೆಳಗಾವಿಯ ವೀರಭಾರತ ಮುದ್ರಣಾಲಯದ ಒಡೆಯರು ಎ. ಪಿ. ಚೌಗುಲೆ ಅವರಿಗೂ ವಂದನೆಗಳನ್ನು ಸಲ್ಲಿಸದೆ ಇರಲಾರೆವು. ಕನ್ನಡಿಗರು ಈ ಪುಸ್ತಕವನ್ನು ಒಕ್ಕೈ ಆದರಪೂರ್ವಕವಾಗಿ ಸ್ವಾಗತಿಸುವರೆಂದು ಆಶಿಸುತ್ತೇವೆ.

ಯುಗಾದಿ,<br>
ಎಪ್ರಿಲ್ ೧೯೪೭

**ಕೆಳೆಯರ ಕೂಟ,**<br>
ಬ್ಯಾಡಗಿ.

# ವಿವರ







# ವಿಷಕನ್ಯೆ!

ಗೌರಿ ಹುಣ್ಣಿಮೆಯ ಚಂದಿರ ಬಾನಿನಲ್ಲಿ ಬೆಳಗುತ್ತಿದ್ದನು. ಸುಧೆಯ ಕಿರಣ ನಾಡಿನ ತುಂಬ ಸೂರೆಗೊಂಡಿದ್ದುವು. ಭುವಿಯ ಮೇಲಿನ ಹರುಷ ವನ್ನು ತಾರೆಗಳು ಕಂಗೆಟ್ಟು ನೋಡುತ್ತಿದ್ದುವು. ನಾವೂ ಜಗದ ಮಕ್ಕಳಾಗ ಬೇಕಿತ್ತು ಎಂದು ಆಸೆ ಪಡುವಂತೆ ತೋರುತ್ತಿದ್ದುವು.

ನಮ್ಮ ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತುಕೊಂಡು ಮೇಲೆ ವಿಸ್ತಾರವಾಗಿ ಹಬ್ಬಿದ ಬಾನನ್ನು ನಿರೀಕ್ಷಿಸುತ್ತಿದ್ದೆ. ಚಂದಿರ ನಮ್ಮ ಮನೆಯ ಮೇಲೆಯೆ ಬಂದಿದ್ದ. ತಾರೆಗಳು ನಮ್ಮ ಮನೆಯ ಸುತ್ತುಮುತ್ತಲಿನ ಸ್ಥಳದ ಲ್ಲಿಯೆ ಸುಳಿದಾಡುತ್ತಿದ್ದವು. ಒಮ್ಮೆ ಮೋಡದ ಪಡೆಯಲ್ಲಿ ಚಂದಿರ ಮರೆ ಯಾಗುತ್ತಿದ್ದ. ಇನ್ನೊಮ್ಮೆ ಕುತ್ತಿನೊಳಗಿಂದ ಪಾರಾಗಿ ಬಂದವನಂತೆ ತೋರುತ್ತಿದ್ದ. ತಾರೆಗಳಿಗೇನು ? ಮೋಡದ ಅರಿವಿಲ್ಲ. ಚಂದಿರನ ಅರಿವೂ ಇಲ್ಲ. ನಾಡ ಐಸಿರಿಯನ್ನು ನೋಡಿ ನಗುತ್ತಿವೆ. ನಲಿಯುತ್ತಿವೆ. ಒಂದೇ ಸವನೆ ಓಡುತ್ತಿವೆ. ಹೀಗೆಯೆ ಎಲ್ಲೆ ಇಲ್ಲದ ಒಂದು ಭಾವ-ಜಾಲದಲ್ಲಿ ಸಿಕ್ಕು ಸುಳಿದಾಡುತ್ತಿದ್ದೆ. ಆಗ ಹಿಂದಿನಿಂದ ಬಂದು ಯಾರೋ ಕಣ್ಣು ಮುಚ್ಚಿದರು.

'ಯಾರು ?' ಎಂದೆ.

ಕಣ್ಣು ಮುಚ್ಚಿದ ಮೂರುತಿ ಮೌನವಾಗಿತ್ತು.

'ಪಾರ್ವತೀ' ಎಂದೆ.

ಮತ್ತೂ ಅದೇ ಮೌನ.

'ಅಲ್ಲೇ ಜಾಣೆ, ನಿನ್ನ ಲಂಗ, ಕಿರಿಬೆರಲು, ಕಾಲಂದುಗೆ ಇವು ನನಗೆ ಹೇಳುವುದಿಲ್ಲವೇ ನೀನೇ ಪಾರ್ವತಿಯೆಂದು! ಬಿಡು ಕೈ' ಎಂದೆ.

'ನಾನು ಪಾರೂ ಅಲ್ಲ'

'ಹಾಗಾದರೆ ಏನು ಗೌರಿಯೇ ?'

'ಊಹೂಂ'

'ಹಾಗಾದರೆ ತಂಗಿಯೆ ?'

'ಊಹೂಂ'

'ಹಾಗಾದರೆ ಅಣ್ಣನೇ?'

'ಹ್ನ! ಹ್ನ! ಹ್ನ! ಅಲ್ಲಣ್ಣ, ಅಲ್ಲ!'

'ಏನು ಅಲ್ಲನೇ?'

'ಊಹೂಂ'

'ಮತ್ತೇನು ಪಾರ್ವತಿ!'

'ನೀನೇ ಹೇಳು'

'ರೋಹಿಣಿಯೇ?'

'ಏನು? ಏನs ಅಣ್ಣ?'

'ರೋಹಿಣಿ! ಗೊತ್ತಾಗಲಿಲ್ಲೇನು?'

'ಇಲ್ಲ. ಏನದು?'

'ಚಿಕ್ಕೆ! ತಾರೆ!'

'ಛ್ಹ, ಅದೇ ಸರಿ. ನಾನು ಚಿಕ್ಕೆ ನೋಡಣ್ಣ!'

'ಇನ್ನಾದರೂ ಕೈ ಬಿಡು ಪಾರ್ವತೀ'

'ಬಿಟ್ಟೆ. ತಟ್ಟೇ ಮನಿ ಹಾಳಾತು. ಹಾಳ್ಮನಿ ದೆವ್ವ ಬಂದು ಬಡೀಲಿ.' ಇಂತು ಪಾರ್ವತಿ ಭವಿಷ್ಯ ಸೂಚಿಸಿ ಇದಿರಿನಲ್ಲಿ ಬಂದಳು. ಅಪ್ಪಿಕೊಂಡೆ. ನಾನು, ನನ್ನ ತಂಗಿ ಪಾರ್ವತಿ ಹಾಲುಗಡಲಿನ ಸೀಮೆಯಲ್ಲಿ ತೇಲಾಡಿದೆವು. ಅಂತಹ ಸಂಭ್ರಮ ಬಾಳಿನಲ್ಲಿ ಎಂದಾದರೂ ಬಂದೀತೇನು?

* * * *

ಗೌರಿ ಹುಣ್ಣಿಮೆಯ ದಿನ ನಮ್ಮೂರಿನಲ್ಲಿ ಆ ರಾತ್ರಿ ಕಂಡ ಸೊಬಗೇನು? ಕಾಣುವ ಕಣ್ಣೇ ಉತ್ತಮ ಬಣ್ಣನೆಗಾರ. ನಗರದ ವಿದ್ಯುದ್ದೀಪ ನಮ್ಮೂರಿಗೆ ಎಂದಿಗೂ ಬೇಡ. ಹಣತೆಯ ಮುಂದೆ ಯಾವ ದೇವಲೋಕದ ಸೊಬಗು! ಮನಃ ಪಾವಿತ್ರ್ಯದ ಮುಂದೆ ಯಾವ ಹಿಮಗಿರಿಯ ಗಂಗಾ ಸ್ನಾನ!

'ಗೌರಿ ಗೌರಿ, ಗಾಣಾ ಗೌರಿ, ಕುಂಕುಮ ಗೌರಿ, ಅರಿಸಿನ ಗೌರಿ' ಎಂದು ಮಾದೇವಿಯನ್ನು ಹಾಡುತ್ತ ಕೈಯಲ್ಲಿ ತುಪ್ಪದ ಹಣತೆಯನ್ನು ಹಿಡಿದು

ಕೊಂಡು ಚೆಂಡು ಹುವ್ವಿನ ರಾಸಿಯಂತೆ ಗುಂಪಿಟ್ಟುಕೊಂಡು ಹೋಗುವ ನಮ್ಮೂರಿನ ಕಿರಿಗುವರಿಯರ ಮುಂದೆ ದೇವಲೋಕದ ರಾಣಿಯರು ಬಂದು "ಸಲಾಮ್" ಮಾಡದೇ ಏನು? ತಾಯಿ ಮನೆಗೆಂದು ತೆಗೆದಿಟ್ಟ ತುಪ್ಪ ಇಂದು ಮಕ್ಕಳ ಮನಕ್ಕಾಗಿ! ತಾಯಿ ಮನೆಗೆಂದು ಬಚ್ಚಿಟ್ಟ ಹೊನ್ನು ಇಂದು ಮಕ್ಕಳ ತಲೆಯ ಮೇಲೆ! ತಾಯಿ ದೇವನಿಗೆಂದು ಬೆಳಸಿದ ಹೂ ಇಂದು ಮಕ್ಕಳ ಮುಡಿಯ ಮೇಲೆ. ಅಯ್ಯೊ! ಜೀವ ಕುಣಿಯುತ್ತದೆ ಆ ದೃಶ್ಯವನ್ನು ನೆನಪು ಮಾಡಿಕೊಂಡಾಗೊಮ್ಮೆ!

ಗುಡಿಯ ಗೌರಿಗೆ ಪೂಜೆ ಸಲ್ಲಿಸ ಹೊರಟ ಕುವರಿಯರ ಸಮೂಹ ನಮ್ಮ ಮನೆಯ ಮುಂದೆ ಬಂದು ನಿಂತಿತು. ಎಂಟು ವರುಷದ ಪಾರ್ವತಿ ಯನ್ನು ತಮ್ಮ ದಂಡಿನಲ್ಲಿ ಸೇರಿಸಿಕೊಂಡು ಹೋಗಲು ಅವರೆಲ್ಲ ಕಾಯ್ದು ನಿಂತರು.

'ಪಾರಮ್ಮ! ಬೇಗ ಬಾರೇ!' ಎಂದು ಎಲ್ಲರೂ ಒಂದೇ ದನಿಯಲ್ಲಿ ಕೂಗಿದರು.

ಆ ಕೂಗಿನಲ್ಲಿ ಪ್ರೇಮ ಉಕ್ಕುವುದ ಕಂಡೆ. ಸೌಜನ್ಯ ನರ್ತನ ಗೈಯು ವುದ ನೋಡಿದೆ.

ನಮ್ಮ ಪಾರ್ವತಿ ಹೊರಗೆ ಬಂದಳು. ಕೈಯಲ್ಲಿ ಹಣತೆ; ಐದುಕಡೆ ಕುಡಿಯಿಟ್ಟ ಹಣತೆ! ನನ್ನ ಕಣ್ಣಿನಲ್ಲಿ ಆನಂದ ತಂಪಾಗಿ ಸೂಸಿತು.

'ಪಾರೂ, ಎಲ್ಲಿ ನೋಡೋಣಮ್ಮ!'

ತಂಗಿ ತಿರುಗಿದಳು. ಪಾರ್ವತಿ ಕುಂಕುಮ ಇಟ್ಟಿದ್ದಳು. ಚಿಕ್ಕ ಹೆಳಲು. ಅದಕ್ಕೆ ಅಪ್ಪಿಕೊಂಡ ಚೆಂಡು ಹೂಮಾಲೆ. ಅರಳಿದ ಕಣ್ಣು. ನಗುವ ತುಟಿ. ಹಿಗ್ಗಿದ ಮುಖ. ಲಂಗ ಉಟ್ಟಿದ್ದಳು. ಕಾಲಂದುಗೆ ಹಾಕಿದ್ದಳು. ಎಳೆಯ ಕೈಯಲ್ಲಿ ಹೊಳೆಯುವ ಹಣತೆ. ಹಣತೆಯ ಬೆಳಕಿನಲ್ಲಿ ತಂಗಿ ತಾರೆಯಂತೆ ಮಿನುಗಿದಳು.

'ಹೂಂ. ನಡಿ. ಕೂಡಿಕೊ ಬಳಗಾನ' ತಾಯಿ ಹೀಗೆ ಹೇಳಿ ಪಾರ್ವತಿ ಯನ್ನು ಬಳಗದಲ್ಲಿ ಕೂಡಿಸಿದರು.

'ದೀಪ ಆರೀತು ಜೋಕೆ!' ಎಂದರು ತಾಯಿ.

ಬಳಗ ಹೆಜ್ಜೆಯಿಡತೊಡಗಿತು. ತಾಯಿ ಮತ್ತೆ ಮುಂದಕ್ಕೆ ಹೋದರು.

'ಹೀಗೆ ಹಿಡಿದುಕೊಳ್ಳೇ' ಎಂದು ಪಾರ್ವತಿ ಸರಿಯಾಗಿ ಹಿಡಿದು ಕೊಂಡ ಹಣತೆಯನ್ನು ಮತ್ತೆ ಸರಿ ಮಾಡಿದರು. ಅದೊಂದು ನೆವ ಮಾತ್ರ. ಮಗಳನ್ನು ಇನ್ನೊಮ್ಮೆ ಕಣ್ತುಂಬ ನೋಡಬೇಕಾಗಿತ್ತು ಅವರಿಗೆ. ತಲೆಯ ಮೇಲಿನ ಮಾಲೆಯನ್ನು ತೀಡಿದರು. ಪಕಳೆ ಉದುರಿ ನೆಲಕ್ಕೆ ಬಿದ್ದುದೂ ಅವರಿಗೆ ಗೊತ್ತಾಗಲಿಲ್ಲ. ಮತ್ತೆ ತೀಡಿದರು. ಹುಣ್ಣಿಮೆಯ ಚಂದ್ರಮನಂತೆ ದುಂಡಾಗಿದ್ದ ಕುಂಕುಮದಲ್ಲಿ ಏನು ಕಲಂಕ ಕಂಡರೋ! ತೀಡಿಯೆ ತೀಡಿದರು. ಎರಡು ಕೈಯಿಂದ ಮಗಳ ಗಲ್ಲ ಮುಟ್ಟಿ 'ಹೋಗು' ಎಂದರು.

ಪಾರ್ವತಿ ಹೋದಳು.

ಆರತಿಯ ಬೆಳಕು ಮಂಜಾಗುವ ವರೆಗೂ ಕಟ್ಟೆಯ ಮೇಲೆ ಕುಳಿತು ನೋಡಿದೆ. ಎದ್ದು ನಿಂತು ನೋಡಿದೆ. ಕಣ್ಣು ಹಿಗ್ಗಿಸಿ ನೋಡಿದೆ.

ಬಳಗ ಹೋಯಿತು. ಪಾರ್ವತಿ ಹೋದಳು.

ಮೇಲೆ ತಾರೆ ನನಗಾಗಿ ಕಾಯ್ದಿದ್ದವು. ಆನಂದ ಮತ್ತೆ ನನ್ನ ದಾರಿಯನ್ನೇ ನೋಡುತ್ತಿತ್ತು.

* * * *

ಆಗಸವನ್ನು ನೋಡುತ್ತ ಕುಳಿತು ಎಷ್ಟು ಹೊತ್ತಾಯಿತೊ, ಗೊತ್ತಿಲ್ಲ. ನನಗೆ ಮಾತ್ರ ಆ ಸಮಯವೆಲ್ಲ ಕಣ್ಣು ಮುಚ್ಚಾಟದಂತೆ ತೋರಿತು. ಗುಡಿಗೆ ಹೋದ ಮಕ್ಕಳು ತಿರುಗಿ ಬರುವ ಸೂಚನೆ ಆಯಿತು. 'ಗೌರಿ'ಯ 'ಸೋಬಾನ' ಕೇಳುತ್ತಿತ್ತು. ಮಕ್ಕಳ ಕಾಲಂದುಗೆಯ ಸಪ್ಪಳ ಹತ್ತಿರ ಹತ್ತಿರ ಬರುತ್ತಿತ್ತು. ಕಿವಿದೆರೆದು ನಿಂತೆ. ಕಣ್ದೆರೆದು ನೋಡಿದೆ.

ದಂಡು ಬಂದಿತು. ಪಾರ್ವತಿ ಬಿಡಿಯಾದಳು.

ಭೋರನೆ ಗಾಳಿ ಬೀಸಿತು. ಚಂದಿರ ಹೊಯ್ದಾಡಿದ. ತಾರೆಗಳು ಕಂಗೆಟ್ಟವು. ಮೋಡಗಳು ತುಳುಕಾಡಿದವು.

ಪಾರ್ವತಿ ಮನೆಯ ಹೊಸ್ತಿಲಲ್ಲಿ ಕಾಲಿಟ್ಟಿರಲಿಲ್ಲ. ಅವಳ ಹಣತೆ ಆರಿತು. ಎಡವಿದಳು. ಬಿದ್ದಳು. ಹಣತೆ ಒಡೆಯಿತು.

ತಾಯಿ ಒಳಗಿನಿಂದ ಓಡಿ ಬಂದರು.

ಗೌರಿ ಹುಣ್ಣಿಮೆ ಮುಗಿಯಿತೇ ತಾಯಿ' ಎಂದರು. ಪಾರ್ವತಿ ಮೌನವಾಗಿದ್ದಳು. ಅವಳ ಕಂಠದಲ್ಲಿ ಏನೋ ಕುಳಿತಿತ್ತು. ಏನದು ?

ಗೌರಿಹುಣ್ಣಿಮೆ ಕಳೆದು ತಿಂಗಳಾಗಲಿಲ್ಲ. ಪಾರ್ವತಿಯ ಕಂಠ ಕಟ್ಟುತ್ತ ಬಂದಿತು. ಕಣ್ಣಿನಲ್ಲಿಯ ಜ್ಯೋತಿ ಮಂದವಾಗುತ್ತ ನಡೆಯಿತು. ನನ್ನ ಜೀವದ ತಂಗಿ ಜಡವಾಗುತ್ತ ನಡೆದಳು.

ಕಂಠದಲ್ಲಿ ಕುಳಿತಿದ್ದುದು ಕುತ್ತು. ಅವಳಿಗೆ ವೈರಿಯಾಗಿ ಬಂದಿತ್ತು. ಕಾಮಿ ಬೇಟೆಗಾಗಿ ಹೊಂಚು ಹಾಕಿದಂತೆ ಕಾಲ ಕಾಯ್ದು ಕುಳಿತಿದ್ದ.

ಪಾರ್ವತಿ ಬೇನೆಗೊಂಡಳು. ಎಂಟು ವರುಷದ ತಂಗಿ ಉಣಬಾರದ ನಂಜನ್ನು ಉಂಡಳು.

ವೈದ್ಯರನ್ನು ಕರೆದು ತಂದೆವು. ಅವರು ಮಾತನಾಡಲಿಲ್ಲ. ಅಯ್ಯನವರನ್ನು ಬೇಡಿದೆವು. 'ಮೂರು ಗಂಡಿನ ಮೇಲಿನ ಹೆಣ್ಣು ಮಣ್ಣಿಗೆ ಮೀಸಲು! ವಿಷಕನ್ಯೆ' ಎಂದರು.

ಗೌರಿಹುಣ್ಣಿಮೆಯ ತಿಂಗಳು ತುಂಬುತ್ತಿತ್ತು. ಪಾರ್ವತಿ ಗೌರಿಯ ನಲುಗುವರಿಯಾಗ ಬಯಸಿದಳು. ತಂಗಿ ನನ್ನನ್ನು ಮರೆತಳು. ಒಂದು ಮುಂಜಾನೆ ಮನೆ ಬಿಟ್ಟು ಹೊರಟಳು.

ಹೊರಟಳೇ ? ಅಲ್ಲ. ಪಾರ್ವತಿಯನ್ನು ಒಯ್ದರು.

*   *   *

ಗೌರಿ ಹುಣ್ಣಿಮೆ ವರುಷ ವರುಷಕ್ಕೂ ಬರುತ್ತಿದೆ.

ಮನೆಯ ಕಟ್ಟೆಯ ಮೇಲೆ ಕುಳಿತು ವರುಷ ವರುಷವೂ ಗೌರಿಹುಣ್ಣಿಮೆಯ ಬೆಳುದಿಂಗಳನ್ನು ನಿರೀಕ್ಷಿಸುತ್ತೇನೆ. ನನ್ನ ತಂಗಿ ಹೋಗಿಲ್ಲ. ನನ್ನ ಹತ್ತಿರವೇ ಇದ್ದಾಳೆ.

ಒಬ್ಬನೇ ಕುಳಿತಿದ್ದೆ. ಮೇಲೆ ನಗುವ ಚಂದಿರ. ನಲಿಯುವ ತಾರೆಗಳು. ಹಿಟ್ಟು ಹರಹಿದಂತೆ ತೋರುವ ಬಿಳಿಯ ಬಾನು.

ಕೆಳಗಡೆ ನಮ್ಮೂರಿನಲ್ಲಿ ನನ್ನ ಮುಂದೆ ಗೌರಿಯ ಪೂಜೆಗಾಗಿ ಹೆಣ್ಣು ಗಳು ಗುಂಪು ಗುಂಪಾಗಿ ನಡೆದಿದ್ದವು.

ನಮ್ಮ ಮನೆಯ ಮುಂದೆ ಊರ ಮಕ್ಕಳು ಬಂದರು. ಹಾಗೆಯೆ ಮುಂದಕ್ಕೆ ನಡೆದರು.

ನಾನದನ್ನು ಕಣ್ಣು ಬಿಡುತ್ತ ನೋಡಿದೆ.

ಮಕ್ಕಳು ಮುಂದಕ್ಕೆ ಸಾಗಿಯೆ ಸಾಗಿದರು. ಮನೆ ದಾಟಿ ಹೋದರು.

ಮೌನವಾಗಿ ಕುಳಿತ ನನಗೆ ಹಿಂದಿನಿಂದ ಏನೋ ಸಪ್ಪಳ ಕೇಳಿದಂತಾ ಯಿತು. ತಿರುಗಿ ನೋಡಿದೆ.

ಹೊಸ್ತಿಲಲ್ಲಿ ತಾಯಿ ನಿಂತು ಕಣ್ಣೀರು ಹಾಕುತ್ತಿದ್ದಾರೆ!

ನಾನು ಅಲ್ಲಿಂದ ಎದ್ದು ಹೋದೆ.

ಯಾರೋ ನಕ್ಕಂತಾಯಿತು. ಸುತ್ತಲೂ ನೋಡಿದೆ. ಯಾರೂ ಇರ ಲಿಲ್ಲ. ಮೇಲೆ ನೋಡಿದೆ. ತಾರೆ ನಗುತ್ತಿದ್ದವು.

ಅದು ತಾರೆಗಳ ನಗುವಲ್ಲ. ಪಾರ್ವತಿಯ ನಗು. ಆ ನಗು ಹೃದಯ ವನ್ನು ಹಿಂಡಿತು. ಎದೆಯನ್ನು ಕೊರೆಯಿತು. ಆಗ ಹುಚ್ಚನಂತೆ ಹಂಬಲಿಸಿದೆ: “ಪಾರ್ವತೀ, ನಿನಗೆ ನಗುವೇ?”

---

# ಯಾರಿವಳು ?

‘ ಪಾರ್ವತಿಯ ಅರಿವೆಗಳನ್ನೆಲ್ಲ ಕೊಟ್ಟುಬಿಡಿರಿ. ಅವಳ ವಸ್ತುಗಳನ್ನು ಒಂದೂ ಇಟ್ಟುಕೊಳ್ಳೋದು ಬೇಡ. ಆಕೆಯ ಜತೆಗೇನೆ ಹೋಗಿ ಬಿಡಲಿ ಎಲ್ಲಾ ಅರಿವೆ ಅಂಚಡಿ ’ ಎಂದು ಅಪ್ಪ ಹೇಳಿದರು. ನನಗೂ ಅದೇ ಸರಿ ಎಂದು ತೋರಿತು. ಆದರೂ ಆ ವಿಚಾರ ಒಮ್ಮೊಮ್ಮೆ ಹೊಯ್ದಾಡಿಸುತ್ತಿತ್ತು. ಪಾರ್ವತಿಯ ನೆನಹಿಗಾಗಿ ಅವಳ ಕಾಲಂದುಗೆಯನ್ನಾದರೂ ಇಟ್ಟುಕೊಳ್ಳ ಬಾರದೆ ? ಅಥವ ಲಂಗವನ್ನಾದರೂ ಸಂದುಕದಲ್ಲಿ ಕಾಯ್ದಿಟ್ಟರೆ ಪಾರ್ವ ತಿಯ ನೆನಪು ಉಳಿದೀತು. ಏನು ತಪ್ಪು ಬಂತು ಆದರಲ್ಲಿ ? ಆ ಲಂಗ ನೋಡಿದ ಕೂಡಲೆ ಪಾರ್ವತಿ ಅದನ್ನು ಉಟ್ಟು ನಿಂತಿದಾಳೋ ಎನ್ನುವಂತೆ ತೋರುತ್ತದೆ. ಅದನ್ನು ನೋಡಿಯಾದರೂ ಮನದ ನೋವನ್ನು ಇಂಗಿಸ ಬಹುದು, ಒಮ್ಮೆ ಹೀಗೆ ವಿಚಾರ. ಮರುಕ್ಷಣವೆ ದುಃಖ ಅಲೆಯಲೆಯಾಗಿ ಬಂದು ವಿಚಾರದ ತೆಪ್ಪವನ್ನು ಮುಳುಗಿಸಿ ಶೂನ್ಯಕ್ಕಿಂತಲೂ ಶೂನ್ಯವಾದ ಜಗತ್ತನ್ನು ಎದುರಿಗೆ ನಿಲ್ಲಿಸಿ ಬಿಡುವುದು. ಸತ್ತ ತಂಗಿ ಇನ್ನು ಮೇಲೆ ನನಗೆ ಹೇಗೆ ತಂಗಿಯಾಗಬೇಕು ? ಅವಳು ಮಣ್ಣಾಟವಾಡಿದ ಆ ಭೂಮಿ, ಅವ ಳನ್ನು ತನ್ನ ಮಡಿಲಲ್ಲಿಟ್ಟುಕೊಂಡು ಪೋಷಿಸಿದ ಆ ತೊಟ್ಟಿಲು, ಅವಳುಟ್ಟು ಹರಿದು, ಚಿಂದಿಯಾದ ಆ ಲಂಗ—ಎಲ್ಲವೂ ನನ್ನ ಶೋಕವನ್ನು ಹೊತ್ತಿಸು ವಾಗ, ಅವುಗಳನ್ನು ಕಾಯ್ದಿಟ್ಟರೂ ಫಲವೇನು ? ಸರಿ. ಬಡವರಿಗಾದರೂ ಕೊಟ್ಟರೆ ಆನಂದ ಪಟ್ಟಾರು. ಪಾರ್ವತಿಯ ಗೊಂಬೆ, ಕಾಲಂದುಗೆ, ಜರ ತಾರಿ ಲಂಗ—ಇನ್ನೂ ಏನೇನೊ ಸಾಮಾನು ಎಲ್ಲವನ್ನೂ ಇಂದು ಕೊಟ್ಟು ಬಿಡುವುದೇ ಸತ್ಯ. ತಾಯಿ ಕೊಡದಿದ್ದರೆ ಅವರ ಕಣ್ಣಿನಿಂದಾದರೂ ಅವು ಗಳನ್ನು ಮರೆ ಮಾಡುವುದೇ ಖಂಡಿತ. ಅವರಿಗೆ ಒಮ್ಮೆ ಹೇಳಿ ನೋಡಿ ನಂತರ ಅವುಗಳನ್ನು ಪಾರುಗಾಣಿಸುತ್ತೇನೆ. ಅವರು ಒಪ್ಪಿದರೆ ಸರಿ. ಒಪ್ಪ ದಿದ್ದರೂ ಹಾನಿಯಿಲ್ಲ. ತಾಯಿ ಇದ್ದಲ್ಲಿಗೆ ಹೋಗಿ ಈ ಪ್ರಶ್ನೆ ಎತ್ತಿದೆ.

‘ ಪಾರ್ವತಿಯ ಒಡವೆಗಳನ್ನೆಲ್ಲ ಕೊಟ್ಟು ಬಿಡು ಎಂದು ಅಪ್ಪ ಮೊನ್ನೆಯೇ ಹೇಳಿದಾರೆ. ಇನ್ನೂ ಏಕೆ ಕೊಟ್ಟಿಲ್ಲ ಅವ್ವ ? ’

' ಎಲ್ಲಿ ಇವೆ ? ಎಲ್ಲಾ ಮೊನ್ನೆ ಕೊಟ್ಟುಬಿಟ್ಟೆ. ಅವನ್ನಿಟ್ಟುಕೊಂಡರೆ ಹೋದವಳು ತಿರುಗಿ ಬಂದಾಳೇ ತಮ್ಮಾ !'

' ನಾನೂ ಅದನ್ನೇ ಯೋಚಿಸಿದ್ದು. ಹೋದವರು ಹೋದರು. ತಿರುಗಿ ಬಾರರು. ಅಂದ ಮೇಲೆ ಅತ್ತು ಫಲವೇನು ? '

' ಅತ್ತರೂ ಇಲ್ಲ. ಕರೆದರೂ ಇಲ್ಲ. ಸತ್ತವರ ಬಾಯಿಗೆ ಮಣ್ಣು

' ಆಗಲಿ ಬಿಡು. ಅಂತೂ ಏನೂ ಇಟ್ಟುಕೊಂಡಿಲ್ಲವಲ್ಲ ! '

' ನಿನಗೆ ನಂಬಿಕೆ ಇರದಿದ್ದರೆ ಸಂದುಕವನ್ನು ತೆರೆದು ನೋಡು, ತಮ್ಮ ! '

ಹಾಗಲ್ಲ ಅವ್ವ, ಈ ಮಾತಿನಲ್ಲಿ ನಂಬಿಕೆ ಅಪನಂಬಿಕೆಗೆ ಎಡೆ ಎಲ್ಲಿ ? ಇಷ್ಟೆ, ಪಾರ್ವತಿಯ ಸಾಮಾನು ಎದುರಿಗಿದ್ದರೆ ನಿನ್ನ ಕಣ್ಣಲ್ಲಿ ನೀರೇ ತಪ್ಪುವುದಿಲ್ಲ. ಅದಕ್ಕೆ ಇಷ್ಟು ಕೇಳುತ್ತಿರುವುದು. ಅವಳ ಆಟಿಗೆ ಸಾಮಾನು ನೋಡಿ ಆನಂದವಾಗುತ್ತಿದ್ದರೆ ಇಟ್ಟುಕೊಳ್ಳಬೇಡ ಎನ್ನುವವರಾರು ? '

ಇಷ್ಟಕ್ಕೆ ಮಾತು ನಿಂತಿತು. ತಾಯಿ ಮನೆಗೆಲಸಕ್ಕೆ ಒಳಗೆ ಹೋದರು. ನಾನು ಕ್ಷಣ ಹೊತ್ತು ಕುಳಿತಲ್ಲಿಯೇ ಕುಳಿತು ತಾಯಿ ಮನೆಗೆಲಸದಲ್ಲಿ ತೊಡಗುವುದನ್ನು ನಿರೀಕ್ಷಿಸಿದೆ. ಆ ಮೇಲೆ ಪಾರ್ವತಿಯ ಸಾಮಾನುಗಳಿದ್ದ ಸಂದುಕದ ಕಡೆಗೆ 'ಕಾಮಿ' ನಡಿಗೆಯಿಂದ ಹೋಗಿ ಅದನ್ನು ಪರೀಕ್ಷಿಸಿದೆ. ಪಾರ್ವತಿಯ ವಸ್ತು ಒಡವೆಗಳು ಒಂದೂ ಇರಲಿಲ್ಲ. ಅವು ಯಾರ ಕೃಪೆಗಾಗಿ ಕಾಯ್ದು ಕುಳಿತಿದ್ದವೊ !

*　　*　　*　　*

ಅಂದು ಸೋಮವಾರ. ಚುಮು ಚುಮು ಬೆಳಕು ಹರಿಯುತ್ತಿತ್ತು. ನಾನಿನ್ನೂ ಹಾಸಿಗೆಯಿಂದ ಎದ್ದಿರಲಿಲ್ಲ. ನಿದ್ದೆಯಿಂದ ಎಚ್ಚತ್ತು ಕಣ್ಣು ತೆರೆಯುವಷ್ಟರಲ್ಲಿ ತಾಯಿ ನನ್ನ ಹಾಸಿಗೆಯ ಬಳಿ ಬಂದು ನಿಂತಿದ್ದರು.

' ನನ್ನ ಕನಸಿನಲ್ಲಿ ಪಾರ್ವತಿ ಬಂದಿದ್ದಳಪ್ಪ. ಬರುತ್ತೇನೆ ಕರೆದುಕೊ ಅವ್ವ ಎಂದು ಹಲುಬಿದಳು ತಮ್ಮಾ ! '

' ಹ್ಞಾ, ನನಗೂ ಹಾಗೆಯೆ ಕೇಳಿದ ಹಾಗೆ ಇದೆಯಲ್ಲ ! ' ಎಂದು

ಮನಸ್ಸಿನಲ್ಲಿಯೇ ನಾನು ಮಾತಾಡಿದೆ. ತಾಯಿ ಮತ್ತೆ ಹೇಳಿದರು.

'ಹರಿದ ಅರಿವೆ, ತಲೆಗೆ ಎಣ್ಣೆಯಿಲ್ಲದೆ ಬಾಡಿ ಚೆದರಿ ಹೋದ ಕೂದಲು, ಕೈಯಲ್ಲಿ ಒಡೆದ ಮಡಿಕೆಯನ್ನು ಹಿಡಿದುಕೊಂಡು ಬಾಗಿಲಲ್ಲಿ ಬಂದು ನಿಂತಂತಾಗಿತ್ತು ತಮ್ಮ!'

'ಅದೇ ಅನುಭವ ನನಗೂ' ನನ್ನಲ್ಲಿಯೇ ನನಗೆ ಸವಾಲು. ತಾಯಿ ತಮ್ಮ ಕನಸನ್ನು ಮುಂದುವರಿಸಿಯೇ ಇದ್ದರು.

'ಎಷ್ಟು ಸೊರಗಿದ್ದೀಯೆ ತಾಯಿ' ಎಂದು ಕೇಳಿದೆ.

'ಅದಕ್ಕೇನು ಹೇಳಿದಳು ?'

'ನಾನೊಬ್ಬಳೇ ಆಗಿದ್ದೇನೆ. ಅಣ್ಣತಮ್ಮಂದಿರು ನನ್ನನ್ನು ಕರೆಯಲು ಬರುತ್ತೇವೆಂದು ಹೇಳಿದವರು ಇನ್ನೂ ಬರಲಿಲ್ಲ. ನಿನ್ನನ್ನು ನೋಡುವ ಆಶೆ· ನಾನೇ ಬಂದೆ' ಎಂದಳು.

'ಆ ಮೇಲೆ ?'

'ಬಾ, ತಾಯಿ, ತಲೆಗೆ ಎಣ್ಣೆ ತೀಡಿ ನೀರು ಎರೀತೇನೆ. ಹೂ ಮುಡಿಸುತ್ತೇನೆ. ಹೋಗುವಾಗ ನೀನು ಬಿಟ್ಟುಹೋದ ಅರಿವೆ ತೊಡಿಸಿ ಅಟಿಗೆ ಸಾಮಾನು ಕೊಡುತ್ತೇನೆ' ಎಂದೆ.

'ಹಾಗಾದರೆ ಪಾರ್ವತಿಯ ಸಾಮಾನನ್ನು ಇನ್ನೂ ನೀನು ಬಚ್ಚಿಟ್ಟು ಕೊಂಡಿರುವೆಯೇನು ?'

'ಇಲ್ಲಪ್ಪ, ಅದು ಕನಸು.'

'ಆ ಮೇಲೆ ಆ ಹುಡುಗಿ ಏನು ಹೇಳಿದಳು ?'

'ನಿಮ್ಮ ಅರಿವೆ ಅಂಚಡಿ ಏನೂ ಬೇಡ. ನನಗೆ ಹರಕು ಬಟ್ಟೆಯಲ್ಲಿಯೆ ಆನಂದ. ಕೆದರಿದ ಕೂದಲನ್ನಿಟ್ಟುಕೊಳ್ಳುವುದೇ ಸಂತೋಷ. ಒಡೆದ ಮಡಿಕೆಯಲ್ಲಿ ಬಿದ್ದುದನ್ನು ಎತ್ತಿಕೊಂಡು ಬಾಯಿಗೆ ಹಾಕಿಕೊಳ್ಳುವುದೇ ಪರಮಾನ್ನ' ಹೀಗೆಂದು ಹೇಳಿ ಪಾರ್ವತಿ ಕಾಣದಾದಳು ತಮ್ಮ. ಕನಸು ಬರಿದಾಯ್ತು !

'ನಿನ್ನ ಕನಸು ಯಾವಾಗಲೂ ಬರಿದೇ !'

ತಾಯಿ ಇಷ್ಟು ಹೇಳಿದವರೇ ಹೊರಟು ಹೋದರು. ನನ್ನ ಮನಸ್ಸು ಕಲ್ಪನೆಯ ರೆಕ್ಕೆಯನ್ನು ಬಿಚ್ಚಿತು. ಅದರೆದುರು ಮೂಡಿದ ಪ್ರತಿಯೊಂದು ಚಿತ್ರವೂ ಕಣ್ಣೀರಿನ ಬುಗ್ಗೆ. ಅಂದಿನ ರಾತ್ರಿ ತಾಯಿ ಕಂಡ ಕನಸೂ ನನ್ನ ಕನಸೂ ಒಂದೆ! ಅದೇ ಅನುಭವ. ಅದೇ ಮೂರ್ತಿ. ಅದೇ ರೂಪ. ಎಲ್ಲಾ ಅದೇ ಚಿತ್ರ. ಎಷ್ಟಾದರೂ ಕನಸಿನ ಲೋಕ ಎಂದುಕೊಂಡು ಹಾಸಿಗೆ ಸುತ್ತಿ ಮುಖಕ್ಕೆ ನೀರು ಹಾಕಲು ಒಳಗೆ ಹೋದೆ. ಕನಸಿನ ಪರದೆ ಹರಿಯುತ್ತಲೇ ಬಾಳುವೆಯ ಹೋರಾಟ ಕಣ್ಮುಂದೆ 'ಥೈ' ಎಂದು ನಿಂತಿತು. ಜಗವೆಲ್ಲ ಕನಸಿನ ಪ್ರತಿಕೃತಿಯೇನು ?

* * * *

'ಲೋಕ ಕನಸಿನ ಕೃತಿಯಲ್ಲವೇ ?' ಆ ದಿನ ಮುಂಜಾವಿನಿಂದಲೂ ದೇ ವಿಚಾರ. ಮನೆಯ ಬಾಗಿಲ ಮುಂದೆ ಹಾದು ಹೋಗುವವರೆಲ್ಲರೂ ಆ ಪ್ರಶ್ನೆಗೆ ತಾಳ ಹಾಕುವಂತೆ ತೋರುತ್ತಿದ್ದರು. ತಾಯಿ ರೊಟ್ಟಿ ಬಡಿಯುವ ಸಪ್ಪಳವೂ ಆ ಮತಕ್ಕೆ ಬೆಂಬಲ ಕೊಡುತ್ತಿದ್ದಿತು. ವಿಚಾರದ ತೀರ್ಮಾನು ಬೇಗನೆ ಆಗುವದರಲ್ಲಿತ್ತು. ಅಷ್ಟರಲ್ಲಿ ಎದುರಿನಿಂದ ಕೂಗೊಂದು ಬಂದಿತು.

'ತಾಯೀ, ರೊಟ್ಟಿ ನೀಡ್ರೆವ್ವ!' ಬಾಗಿಲಲ್ಲಿ ಸಣ್ಣ ಹುಡುಗಿ ಭಿಕ್ಷೆಗಾಗಿ ಕೂಗುವುದನ್ನು ಕಂಡೆ. ಆ ಮೂರ್ತಿಯನ್ನು ನೋಡಿ ತಬ್ಬಿಬ್ಬಾದೆ.

'ಅವ್ವಾ ಬೇಗ ಬಾ' ಎಂದು ಒಳಗೆ ಓಡಿ ಹೋಗಿ ತಾಯಿಯನ್ನು ಕರೆದೆ. ಕೂಗಿನ ವೇಗವನ್ನು ಹಿಂಬಾಲಿಸಿ ತಾಯಿ ಬಾಗಿಲ ಬಳಿ ಬಂದರು.

'ಅದೇ ರೂಪ ತಮ್ಮ!' ಎಂದರು ತಾಯಿ. ನಾನು, ನನ್ನ ತಾಯಿ ಆ ಹುಡುಗಿಯನ್ನು ಮಾಟದ ಗೊಂಬೆಗಳಂತೆ ನಿಂತು ನೋಡಿದೆವು.

'ನೀಡ್ರೆವ್ವ ತುಣುಕು ರೊಟ್ಟೀನ' ಹುಡುಗಿಗೆ ತನ್ನದೇ ಹಂಬಲ. ಹರಕು ಬಟ್ಟೆ. ಕೆದರಿದ ಕೂದಲು. ಒಡೆದ ಮಡಿಕೆ. ಮುಖದಲ್ಲಿ ಅದೇ ಸೊಬಗು. ಮೂಗಿನಲ್ಲಿ ಅದೇ ಮಾಟ. ತುಟಿಯಲ್ಲಿ ಅದೇ ಚೆಲುವು. ಕಕ್ಕಾಬಿಕ್ಕಿಯಾಗಿ ಆ ಹುಡುಗಿಯನ್ನು ತಾಯಿಮಕ್ಕಳಿಬ್ಬರೂ ನೋಡಿದೆವು.

ಹುಡುಗಿ ನಿರಾಶೆಯ ಧ್ವನಿಯಲ್ಲಿಯೇ ಇನ್ನೊಮ್ಮೆ ಕೂಗಿದಳು. ಮತ್ತೊಮ್ಮೆ ಹಲುಬಿದಳು. ಎಷ್ಟೋ ಸಲ ಕರೆದಳು. ಎದುರಿನಲ್ಲಿ ನಿಂತೂ ನೀಡದೆ ಇದ್ದಾರಲ್ಲ ಎಂದು ಆಕೆಗೆ ಆಶ್ಚರ್ಯ, ನಿರಾಶೆ. ಹುಡುಗಿ ಕೊನೆಯ ಬಾರಿ ಕೂಗಿ ಮುಂದಿನ ಮನೆಗೆ ಹೆಜ್ಜೆ ಇಕ್ಕುವುದರಲ್ಲಿದ್ದಳು. ತಾಯಿ ಮುಂದೆ ಸಾಗು ಬಿದ್ದು ಆಕೆಯನ್ನು ಅಪ್ಪಿಕೊಂಡರು. ಎಡಬಲದಲ್ಲಿ ಯಾರೂ ಇರಲಿಲ್ಲ. ಭಿಕ್ಷುಕಿಯನ್ನು ಒಳಗೆ ಕರೆದುಕೊಂಡು ಬಂದರು. ಆಕೆ ಮನೆಯ ಪಡಸಾಲೆ ಹತ್ತಿ ಬರಲು ಅಂಜಿದಳು. ಅಲ್ಲಿಯೇ ಕೆಳಗಡೆ ನಿಂತಳು. ಇಷ್ಟೊತ್ತಿನ ವರೆಗೂ ನಾನು ಮೂಕ. ಮೂಕನಾಗಿಯೇ ನಿಂತಿದ್ದೆ. ತಾಯಿ ಒಳಗಿನಿಂದ ತಟ್ಟೆಯಲ್ಲಿ ಏನೇನೊ ಸಾಮಾನುಗಳನ್ನು ಇಟ್ಟುಕೊಂಡು ಬಂದು ಹುಡುಗಿಯ ಕೈಗೆ ನೀಡಿದರು. ನೋಡುತ್ತೇನೆ. ಪಾರ್ವತಿಯ ಜರ ತಾರಿ ಲಂಗ, ಬಣ್ಣದ ಪಾಪೆ ಇನ್ನೂ ಏನೇನೊ! ತಾಯಿ ಏನೋ ಹೇಳ ಬೇಕೆಂದು ಮಾಡಿದರು. ಅಷ್ಟರಲ್ಲಿ ಬಾಗಿಲ ದಾಟಿ ಹೋಗಿದ್ದಳು ಭಿಕ್ಷುಕಿ.

ಅಂದಿನಿಂದ ಮನದ ಪಕ್ಕದಲ್ಲೊಂದು ಸೊಲ್ಲು ಎದ್ದು ನನ್ನನ್ನು ಹಿಂಡಿ ಹರಹುತ್ತಿದೆ.

“ಯಾರವಳು ?”

# ಶಾಂತಿದೂತ

‘ ಪಾರೂ ’

................

‘ ಏ, ಪಾರೂ ’

................

‘ ಪಾರಮ್ಮಾ ! ’

................

‘ ಪಾರ್ವತೀ....’

................

‘ ಛೆ. ಮನೆಯಲ್ಲಿ ಇರೋದೆ ಇಲ್ಲ ಹುಚ್ಚಿ. ಎಲ್ಲಿಗೆ ಹೋಗುತ್ತಾಳೊ. ಮುಂಜಾವಿನಿಂದ ಸಂಜೆಯ ವರೆಗೆ ಪಿರಿ ಪಿರಿ ಓಣಿ ಹಿಡಿದು ತಿರುಗುತ್ತಾಳೆ. ಪಾರ್ವತೀನ ಹೊರಗೆ ಬಿಡಬೇಡ ಎಂದು ಅವ್ವನಿಗೆ ಹೇಳಿ ಬಿಡ್ತೀನೆ. ’ ಹೀಗೆ ನನ್ನಷ್ಟಕ್ಕೆ ನಾನೆ ಮಾತನಾಡಿ ತಾಯಿಯನ್ನು ಕೂಗಿದೆ. ಒಳಗಿನಿಂದ ತಾಯ ಕೂಗು ಉತ್ತರವಾಗಿ ಬಂದಿತು. ಕೂಗಿನೊಡನೆ ತಾಯಿಯೂ ಬಂದರು.

‘ ಪಾರ್ವತಿ ಎಲ್ಲಿ ಹೋಗಿದ್ದಾಳೆ ? ಮನೆಯಲ್ಲಿ ಕಾಣೋದೆ ಇಲ್ಲ ! ಎಂದು ಕೇಳಿದೆ.

‘ ಇನ್ನೆಲ್ಲಿ ಹೋಗ್ತಾಳೆ ಆಕೆ. ಹೋದರೆ ಕುಂಬಾರ ಮನೆಗೇ ಹೋಗ ಬೇಕು ’ ತಾಯಿ ಹೇಳಿದರು.

‘ ಕುಂಬಾರ ಮನಿಗೇ ’

‘ ಹೂಂ. ಕುಂಬಾರ ಮನಿ ಕಟ್ಟೀ ಮೇಲೆ ಗಡಿಗಿ ಮಾಡೋದು ನೋಡ್ಕೋತ ಕುಂತಿರ್ತಾಳೆ. ’

' ದಿನವೂ ಅಲ್ಲಿಗೇ ಹೋಗುತ್ತಾಳೇನು ?'

' ಈಗ ಹೋಗಿ ನೋಡು. ತಿಳಿದೀತು. '

ಮಾತು ಅಷ್ಟಕ್ಕೆ ಮುಗಿಸಿ ಕುಂಬಾರ ಮನೆಯ ಕಡೆಗೆ ನಡೆದೆ. ಗಡಿಗಿ ಬಡಿಯುವ ಸಪ್ಪಳ ಕೇಳುತ್ತಿತ್ತು. ಮನೆಯ ಸಮೀಪಕ್ಕೆ ಹೋಗಿ ನೋಡುತ್ತೇನೆ. ಪಾರ್ವತಿ ಸಜ್ಜಾಗಿ ಕುಳಿತಿದ್ದಾಳೆ. ಮಲ್ಲಪ್ಪ ತಿಗರಿ ನಡೆಸಿದ್ದಾನೆ. ಮಲ್ಲಮ್ಮ ಮಣ್ಣಿನ ಹಾಳೆ ತೀಡುತ್ತಿದ್ದಾಳೆ. ಸಣ್ಣ ಮಕ್ಕಳು ಹಸಿ ಮಣ್ಣನ್ನು ತಂದು ಕೊಡುವ ಚಿಕ್ಕ ಪುಟ್ಟ ಕೆಲಸಗಳನ್ನು ಮಾಡುತ್ತಿವೆ. ಎಲ್ಲರೂ ನನ್ನನ್ನು ನಗೆ ಮುಖದಿಂದ ಸ್ವಾಗತಿಸಿದರು. ಮಲ್ಲಪ್ಪ ತಿಗರಿಗೆ ಆಜ್ಞೆ ಮಾಡಿ ಕೆಳಗಿಳಿದು ಬಂದು ಹಾಸಿಗೆ ಹಾಸಿ ನನ್ನನ್ನು ಕುಳ್ಳಿರಿಸಿದ. ಮಲ್ಲಮ್ಮ ಕುಳಿತವನಿಗೆ ತನ್ನ ಸಂಚಿಯಿಂದ ಎಲೆ ಅಡಿಕೆ ತೆಗೆದು ಕೊಟ್ಟಳು. ನನಗೆ ಎಲೆ ತಿನ್ನುವ ಅಭ್ಯಾಸ ಇಲ್ಲದಿದ್ದರೂ ಅವರ ಆತಿಥ್ಯಕ್ಕೆ ಮನ್ನಣೆ ಕೊಡಲೇಬೇಕಾಗಿತ್ತು. ಎಲೆ ಮಡಿಚಿ ಬಾಯೊಳಗೆ ಇಡುತ್ತಲೇ ಪಾರ್ವತಿಯ ಕಡೆಗೆ ನೋಡಿದೆ. ಬಾಡಿದ ಮಲ್ಲಿಗೆಯಂತೆ ಮುಖಮಾಡಿಕೊಂಡು ಕುಳಿತಿದ್ದಳು. ಮಳೆಯಲ್ಲಿ ತೋಯಿಸಿಕೊಂಡ ಗುಬ್ಬಿಯಂತೆ ಪಿಳಿ ಪಿಳಿ ಕಣ್ಣು ಬಿಡುತ್ತಿದ್ದಳು. ನನಗೆ ನಗು ಬಂದಿತು. ಪಾರ್ವತಿ ನಾನು ಬಂದುದನ್ನು ನೋಡಿ ಅಂಜಿದಂತೆ ತೋರುತ್ತದೆ. ನನಗೆ ಅದು ಗೊತ್ತಾಯಿತು. ಮಲ್ಲಮ್ಮ ಗುಟ್ಟನ್ನು ಬಿಚ್ಚಿದಳು. ' ಸಣ್ಣವನಿದ್ದಾಗ ನೀನೂ ಬರ್ತಿದ್ದೆ. ಈಗ ಓದಿ ದೊಡ್ಡವನಾಗೀದಿ. ನಮ್ಮ ಹತ್ತಿರ ಹೇಗೆ ಬಂದೀಯಪ್ಪ. ಪಾರೂಗು ನಮುಗೂ ಈಗ ಬೇಗತನ. '

' ಹೌದು ಮಲ್ಲಮ್ಮ. ಸಣ್ಣವನಿದ್ದಾಗ ನಾನೂ ಬಂದು ಕೂಡ್ತಿದ್ದೆ. ಎಲ್ಲಿ ಇಲ್ಲಾ ಅಂತೇನಿ ?'

' ಬರ್ತಿದ್ದಿ. ನಾವು ಮಾಡಿದ ಗಡಿಗೀನೂ ಒಮ್ಮೊಮ್ಮೆ ಕೆಡಿಸ್ತಿದ್ದಿ. ಕಾಡಿ ಹಸಿ ಮಣ್ಣು ಇಸಗೊಳ್ತಿದ್ದಿ. ನೆಪ್ಪಿಲ್ಲೇನು ? ಹೇಗೆ ನೆಪ್ಪಾದೀತಪ್ಪ. ದೊಡ್ಡ ಶಾರಾ ಹಿಡಿದೆ. '

' ಹಾಗಲ್ಲ ಮಲ್ಲಮ್ಮ. ಎಲ್ಲಾ ಗೊತ್ತಿದೆ. ನಿಮ್ಮ ನೆನಪು ಇರದೇನು ಮಾಡ್ತದೆ. ದಿನವೂ ಹಾದಿ ಹಿಡಿದು ಹೋಗುವಾಗ ನೀವು ಗಡಿಗಿ

ಮಾಡೋದು ನೋಡ್ತೇನಿ. ಬರಬೇಕೂ ಅಂತ ಮನಸೇನೊ ಆಗ್ತದೆ. ಆದರೆ ಕೈಯಾಗ ಕೆಲಸ ಹಿಡಿದು ಹೊರಟರ್ತೇನಿ. ಹಾಗೇ ಹೋಗಿ ಬಿಡ್ತೇನಿ.'

'ನೋಡು ಪಾರಮ್ಮ ಹ್ಯಾಂಗ ಕುಂತಾಳ. ನಾವು ಹೇಳಿದ ಕೆಲಸಾ ಮಾಡ್ತಾಳ. ಆಕೆಗೆ ಮಿದ್ದಿದ ಮಣ್ಣು ಕೊಟ್ಟರೆ ತೀರಿತು, ಇನ್ನೇನೂ ಬೇಡ. ಇಲ್ಲೇ ಕುಂತು ಇಲ್ಲೇ ಮಲಗು ಅಂದ್ರೆ ಮಲಗತಾಳ. ಹೌದಲ್ಲs ಪಾರಮ್ಮ?'

ಪಾರುವಿನ ಕಡೆಗೆ ನೋಡಿದೆ. ಬಲೆಯಲ್ಲಿ ಸಿಕ್ಕ ಮೊಲದಂತೆ ಜೀವ ಗಟ್ಟಿಯಾಗಿ ಹಿಡಿದುಕೊಂಡು ಕುಳಿತಿದ್ದಳು ಅವಳು!

'ಅಣ್ಣ ಏನೂ ಮಾಡೋದಿಲ್ಲ. ಅಂಜಬೇಡ ಹೊಂ ಅನ್ನು' ಎಂದು ಮಲ್ಲಮ್ಮ ಹೇಳಿದಳು. ಪಾರೂ ಕಣ್ಣಿನಲ್ಲಿ ನಗೆ ತೋರಿಸಿದಳು. ಮುಖದಲ್ಲಿ ಕನಿಕರ ಭಾವ ಬಿಂಬಿಸಿದಳು. ನನಗೆ ಎದ್ದು ಹೋಗುವುದೇ ಹಿತವೆಂದು ತೋರಿತು, ತಂಗಿಯನ್ನು ನೋಡಿದಾಗ.

'ಪಾರಮ್ಮ, ಎಲ್ಲಿ ಈ ಕಡೆ ನೋಡ್ತೇನಿ' ಎನ್ನುತ್ತ ಮಲ್ಲಪ್ಪ ತಿಗರಿ ತಿರುಗುವುದನ್ನು ನಿಲ್ಲಿಸಿ ನಮ್ಮ ಕಡೆ ನೋಡಿದ. ಪಾರ್ವತಿ ಕುಳಿತಲ್ಲಿಯೇ ಮಿಸುಕಾಡಿದಳು.

'ಅಣ್ಣ ಬಂದಾನಂತ ಹೇಗೆ ಕುಳಿತಾಳ ನೋಡು ಪಾರು. ತಿಗರಿ ತಿರುಗುವಾಗ ಕಟಿಗಿ ತಂದು ಚುಚ್ತಿದ್ದಿ. ಈಗ ಮಾಡು ನೋಡೋಣ.' ಹೀಗೆ ಮಲ್ಲಪ್ಪ ತಂಗಿಯನ್ನು ಕುರಿತು ನಗುತ್ತ ಮಾತನಾಡಿದ. ಆಕೆ ಇನ್ನೂ ಸುಮ್ಮನೇ ಕುಳಿತಿದ್ದಳು. ಮಲ್ಲಪ್ಪ ಅವಳ ಮೂಗಿಗೆ ಅರಲನ್ನು ಎಳೆದ.

'ಬಿಡು ಮಲ್ಲಪ್ಪ. ಇನ್ನೂ ನಿನ್ನ ನಗಿ ಬಿಟ್ಟೇ ಇಲ್ಲ ನೋಡು. ನನಗೂ ಹೀಗೇ ಹಚ್ಚುತ್ತಿದ್ದಿ. ಮುಪ್ಪಿನಲ್ಲೂ ನಿನಗೆ ಹುಡುಗತನ ಹೋಗಲಿಲ್ಲ' ಎಳೆತನದಲ್ಲಿ ಮಲ್ಲಪ್ಪನೊಡನೆ ಇದ್ದ ನನ್ನ ಸಲುಗೆತನ ಈ ಮಾತನ್ನು ಆಡಿಸಿತು.

'ಮುಪ್ಪಿಗೂ ಹುಡುಗತನಕ್ಕೂ ಸಂಬಂಧ ಬಹಳ' ಎಂದ ಅವನು. 'ಸತ್ಯ' ಎಂದು ಬೇಗನೇ ಒಪ್ಪಿಕೊಂಡೆ. ತಂಗಿಯ ಮುಖ ನೋಡಿದೆ. ಕಣ್ಣೀರು 'ತುದಿಕಳಿಸಿ' ಬಂದಿದ್ದವು. ಎಲ್ಲರಿಗೂ ಬರ್ತೇನೆ ಎಂದು ಹೇಳಿ

ಪಾರ್ವತಿಯನ್ನು ಮನೆಗೆ ಕರೆದುಕೊಂಡು ಬಂದೆ. ಕಾರಣ ಏನು ಎಂದರೆ ಮನೆಯಲ್ಲಿ ನನ್ನೊಡನೆ ಕಾಲ ಕಳೆಯಲು ಪಾರ್ವತಿ ಬೇಕಾಗಿತ್ತು.

*　　*　　*　　*

ಒಂದು ದಿನ ಮನೆಯಲ್ಲಿ ಕುಳಿತುಕೊಂಡಿದ್ದೆ. ಆಡಲು ಯಾರನ್ನೂ ಕರೆದು ತರುವಂತಿರಲಿಲ್ಲ. ಇದ್ದವರೆಲ್ಲ ಇಲ್ಲದಾಗಿದ್ದರು. ಹಿಂದಿನ ದಿನಮಾನಗಳು ವಿಚಾರದ ಓಟವನ್ನು ಹಿಂಬಾಲಿಸಿದವು. ಪಾರ್ವತಿಯನ್ನು ಕುಂಬಾರ ಮನೆಯಿಂದ ಅಂದು ಕರೆದುಕೊಂಡು ಬಂದುದು ನ್ಯಾಯವೇ ? ಈ ವಿಚಾರ ನನ್ನ ಮನಕ್ಕೆ ಅಪ್ಪಳಿಸತೊಡಗಿತು. ಇದರಲ್ಲೇನು ಬಂತು ನ್ಯಾಯ, ಅನ್ಯಾಯ ಎಂದು ಇನ್ನೊಮ್ಮೆ ನನ್ನಷ್ಟಕ್ಕೆ ನಾನೇ ಅಂದುಕೊಂಡೆ. ಮಕ್ಕಳ ಆನಂದಕ್ಕೆ ದೊಡ್ಡವರು ಎಂದಿಗೂ ಅಡ್ಡ ಬರಬಾರದು. ಅವು ಆಡುವಾಗ ಆಡಲಿ. ಉಣ್ಣುವಾಗ ಉಣ್ಣಲಿ. ಮಲಗುವಾಗ ಮಲಗಲಿ. ಕಾನನದ ಪಕ್ಷಿ ಅವು. ಹಸಿದಾಗ ಊಟ, ದಣಿದಾಗ ನಿದ್ರೆ. ಇವುಗಳಿಗೆ ಎಂದಿಗೂ ನಾವು ವೈದ್ಯರಾಗಿ ಬರಬಾರದು. ಹೀಗೆ ನಾನು ಯೋಚಿಸಿದೆ ನನ್ನ ರೀತಿಯಲ್ಲಿ !

ಕಳೆದ ದಿನಗಳ ಸವಿ ನೆನಪು ಹಕ್ಕಿಯಂತೆ ಕಣ್ಮುಂದೆ ಹಾರಿ ಹೋಯಿತು. ನೆನಪು ಹೇಗೇ ಇರಲಿ, ಅದು ಅಮೃತ. ಎಳೆತನದ ದಿನಗಳನ್ನು ನೆನಪು ಮಾಡಿಕೊಳ್ಳುವಲ್ಲಿ ದುಃಖವೆಲ್ಲಿಂದ ಬಂದೀತು ? ಅಂತೆಯೆ ನೆನೆದುಕೊಂಡೆ.

ಎಳೆಯ ದಿನಗಳಲ್ಲಿ ನನಗೆ ಕುಂಬಾರ ಮಲ್ಲಪ್ಪನ ಮನೆಯೆ ಶಾಲೆ. ಮನೆಯಲ್ಲಿ ಕುಳಿತರೆ ಒಂದಿಲ್ಲ ಒಂದು ರೀತಿಯಿಂದ ತೊಂದರೆ. ನನಗೆ ಹಿತವಾದ ಕೆಲಸ ಮನೆಯಲ್ಲಿದ್ದರೂ ಅದನ್ನು ಮಾಡುವುದೆಂದರೆ ಇಲ್ಲದ ಸಂಕಟ. ತಾಯಿತಂದೆಗಳ ಕಣ್ಣು ತಪ್ಪಿಸಿ ಕುಂಬಾರ ಮನೆಗೆ ಬಂದು ಕುಳಿತರೆ ತೀರಿತು. ಮಲ್ಲಪ್ಪ ತಿಗರಿ ತಿರುಗಿಸುವನು. ಮಲ್ಲಮ್ಮ ಅರಲಿನ ಹಾಳೆಗಳನ್ನು ತೀಡುವಳು. ಇದನ್ನೆಲ್ಲ ಕಣ್ಣು ಬಿಟ್ಟು ನೋಡುತ್ತಿದ್ದೆ. ಬೆರಗುವಟ್ಟು ನೋಡುತ್ತ ಕುಳಿತಾಗಲೇ ಮಲ್ಲಪ್ಪ ಮೂಗಿಗೊ, ಹಣೆಗೊ ಅರಲನ್ನು ಹಚ್ಚುವನು. ಮಲ್ಲಮ್ಮ ನಗುವಳು. ಆಕೆ ನಗುವುದನ್ನು ಕಂಡು

ನನ್ನ ತುಟಿಯಲ್ಲಿ ಆಡುತ್ತಿದ್ದ ನಗೆ ಸಪ್ಪಳ ಮಾಡಿ ಬರುವುದು. ಆ ಮೇಲೆ ಮತ್ತೆ ಮೊದಲಿನಂತೆ ಮೈಮರೆವು. ಆರಲಿನ ಗುಂಪಿನಿಂದ ಗಡಿಗೆ ಮೂಡಿ ಬರುತ್ತಿದ್ದುದನ್ನು ಕಂಡು ನನಗೆ ಬಹು ಸೋಜಿಗ. ನೆಟ್ಟಗೆ ಕುಳಿತು ನೋಡು ತ್ತಿದ್ದವನು ಗಡಿಗೆ ತಿಗರಿಯಿಂದ ಏರಿ ಏರಿ ಬರುವಾಗ ಎದ್ದು ನಿಂತು ಎವೆ ಯಿಕ್ಕುತ್ತಿದ್ದೆ. ಹೀಗೆ ಒಂದು ಕಡೆ ಮನ ನೆಟ್ಟು ಕುಳಿತಾಗ ಮನೆಗೆ ಕರೆ ದೊಯ್ಯಲು ಯಾರಾದರೂ ಬಂದರೆ ಹಿಗ್ಗಿದ ಜೀವ ಹಿಮ್ಮೆಟ್ಟುತ್ತಿತ್ತು. ಇಳಿ ಮುಖಬಿಟ್ಟುಕೊಂಡು ಮನೆಗೆ ಸಾಗಬೇಕು. ಎಂಥ ನೋವು ಅದು !

ಪಾರಮ್ಮನಿಗೂ ಅಂದು ಆ ನೋವು ಆಗಿರಬೇಕಲ್ಲವೆ? ಆಗದೆ ಏನು? ಶಿವನೇ, ತಂಗಿಗೆ ನೋವನ್ನುಂಟು ಮಾಡಿದೆ. ನನಗವಳು ಹೇಳ ಲಿಲ್ಲ. ನಿನ್ನ ಮುಂದೆ ನನ್ನ ಅಪರಾಧ ಹೇಳಿದರೆ ನನ್ನನ್ನು ಮನ್ನಿಸು. ಮನ್ನಿಸಲಾರೆಯಾ....? ವಿಚಾರ ಉಪ್ಪು ನೀರಿನಲ್ಲಿ ಹರಿದು ಹೋಯಿತು.

* * * *

ಇಳಿ ಬಿಸಿಲು ಇಳೆಗೆ ಇಳಿಯುತ್ತಿರುವುದನ್ನು ಕಂಡು ವಾಯು ವಿಹಾರ ಕ್ಕೆಂದು ಮನೆಯಿಂದ ಹೊರಬಿದ್ದೆ. ಮನೆಯಲ್ಲಿ ಕುಳಿತರೆ ಹೊತ್ತು ಹೋಗು ವಂತಿಲ್ಲ. ಊಟ, ನಿದ್ದೆ, ಓದು ಇವರೇ ಜತೆಗಾರರು. ಹಕ್ಕಿ ತಂಗಾಳಿಗಳ ನ್ನಾದರೂ ಮಾತನಾಡಿಸಿ ಬರಬೇಕೆಂದು ಮನೆಯನ್ನಗಲಿ ಬಂದರೆ ಬಿಸಿಲಿನ ಚಾಟಿ ಏಟು. ತಿರುಗಿ ಮನೆ ಸೇರುವ ಮನಸ್ಸಾಗದಿದ್ದುದರಿಂದ ಮುಂದುವರಿದೇ ಬಿಟ್ಟೆ. ತಮ್ಮ ತಮ್ಮ ಮನೆಯ ಮುಂಭಾಗದಲ್ಲಿ ಹೆಂಗಸರು ಕುಳಿತು ಮಾತನಾಡುತ್ತಿದ್ದರು. ಅವರ ಮಾತಿನ ಸಂದಣಿಯಲ್ಲಿ ಸಿಕ್ಕು ಹೋಗುತ್ತಿದ್ದ ನನಗೆ ಕುಂಬಾರ ಮನೆಯಿಂದ ಗಡಿಗೆ ಬಡಿಯುವ ಸಪ್ಪಳ ಕೇಳಿಸಿತು. ಹೃದಯಕ್ಕೆ ಏಟು ಬಡಿದಂತಾಯಿತು. ಮನಸ್ಸು ಕಲ್ಲು ಮಾಡಿದೆ. ಅವರೂ ಹಿಡಿತದಲ್ಲಿ ಬರಲಿಲ್ಲ. ಹಸಿ ಗಡಿಗೆ ಕುಂಬಾರನ ಏಟಿಗೆ ರೂಪಗೊಳ್ಳುವಂತೆ ನನ್ನ ಮನಸ್ಸೂ ಆ ಸಪ್ಪಳದ ಹಿಡಿತಕ್ಕೆ ಸಿಕ್ಕು ರೂಪ ಗೊಳ್ಳುತ್ತಿತ್ತು. ಅಂತರಾಳದಲ್ಲಿ ಹೀಗೆ ತಳಮಳ ನಡೆದಾಗಲೆ ಕುಂಬಾರ ಮನೆಯ ಮುಂದೆ ಬಂದು ಬಿಟ್ಟೆ. ಕೆಳಗೆ ಮೊಗವಿಟ್ಟು ನಡೆದಿದ್ದೆ. ಯಾರೋ

ಕರೆದಂತಾಯಿತು. ಮುಖ ಮೇಲಕ್ಕೆ ಮಾಡಿದೆ. ಮಲ್ಲಮ್ಮ ಕರೆಯುತ್ತಿದ್ದಳು. ಹೋದೆ. ಕೆಲಹೊತ್ತು ಯಾರೂ ಮಾತನಾಡಲಿಲ್ಲ. ಕರೆದುದಕ್ಕಾಗಿ ಔಪಚಾರಿಕವಾಗಿ ಮಲ್ಲಮ್ಮನೇ ಮಾತಿಗೆ ಮೊದಲು ಮಾಡಿದಳು.

'ನಮ್ಮಲ್ಲಿಗೆ ಏಕೆ ಬರುವದಿಲ್ಲಪ್ಪ? ಕೆಳಗೆ ಮುಖ ಮಾಡಿಕೊಂಡೇ ಹೋಗುತ್ತೀ.'

'ಇರ್ಲಿ ಬಿಡು. ಏಕೆ ತೆಗೆಯುತ್ತೀ ಆ ಮಾತು' ಮಲ್ಲಪ್ಪ ಹೆಂಡತಿಗೆ ಹೇಳಿದನು. ಆತನ ಕಡೆಗೆ ನೋಡಿದೆ. ತಿಗರಿ ತಿರುಗುತ್ತಿತ್ತು, ಗಡಿಗೆ ಏರಿ ಏರಿ ಬರುತ್ತಿತ್ತು. ಆ ಪೊಳ್ಳುಗಡಿಗೆಯಲ್ಲಿ ಮಲ್ಲಪ್ಪನ ಕಣ್ಣಿನಿಂದ ನೀರು ಉದುರುತ್ತಿದ್ದವು. ಈ ಕಡೆ ಮಲ್ಲಮ್ಮನನ್ನು ನೋಡಿದೆ. ಹಸಿಮಣ್ಣಿನ ಹಾಳೆಯಲ್ಲಿ ಆಕೆ ಕಣ್ಣೀರು ಉದುರಿಸುತ್ತಿದ್ದಳು. ಮತ್ತೊಂದು ಕಡೆ ನೋಡಿದೆ. ಪಾರಮ್ಮ ಮೂಲೆಯಲ್ಲಿ ನನಗೆ ಹೆದರಿ ಕುಳಿತಂತೆ ಕಂಡಂತಾಯಿತು. ಆ ನೋಟವನ್ನು ಸಹಿಸಲಾಗಲಿಲ್ಲ. ಕಣ್ಣು ಮುಚ್ಚಿ ಕಣ್ಣು ತೆರೆದೆ. ತಿಗರಿ ಶಾಂತಿ ಸೂತ್ರ ಹೇಳುತಿತ್ತು: ಜೀವನವೊಂದು ಕುಂಬಾರ ಮನೆ. ಗಡಿಗೆ ಹುಟ್ಟುತ್ತವೆ, ಒಡೆಯುತ್ತವೆ. ಮತ್ತೆ ಮಣ್ಣಿನಲ್ಲಿ ಬೆರೆತು ಮಣ್ಣಾಗಿ ಬರುತ್ತವೆ. ಅಂಜಲೇಕೆ? ಅಳುಕಲೇಕೆ? ಇದು ತಿಗರಿಯ ಸಂದೇಶ. ನನಗಲ್ಲಿ ಕೂಡಲು ಮನಸ್ಸು ಬೇಡೆಂದಿತು. ಎದ್ದು ಬಂದೆ. ಹೊರಡುವಾಗ ಗಂಡ ಹೆಂಡಂದಿರು ಮೌನವಾಗಿದ್ದರು. ಶಾಂತಿದೂತನ ಸಂದೇಶಕ್ಕೆ ಶರಣು ಹೋಗಿದ್ದರು. 'ಕುಂಬಾರನ ತಿಗರಿ ನನಗೆ ಇನ್ನು ಮೇಲೆ ಶಾಂತಿದೂತ' ಎನ್ನುತ್ತ ದಾರಿ ನಡೆದು ಹೋದೆ. ಹಕ್ಕಿ ತಂಗಾಳಿ ಹೌದೆನ್ನುತ್ತಿದ್ದವು.

---

# ಸಿದ್ದ-ಚೆಲುವಿ

ಹಗಲೆಲ್ಲ ಸಿದ್ದನ ಗುಡ್ಡದ ಓವರಿಯಲ್ಲಿ 'ಮೇದು' ಸಂಜೆಯ ಕಡೆ ಮನೆಗೆ ತಿರುಗಿ ಬರುವ ನಮ್ಮ ಚೆಲುವಿಯನ್ನು ಕಂಡರೆ ಎಲ್ಲರಿಗೂ ಒಂದು ಅವರ್ಣನೀಯ ಆನಂದ. ಕೋಡು ಏನು ಮಾಟ! ಮುಖ ಎಷ್ಟು ಚಂದ! ಪೀಳಿಗೆಯಾದರೂ ಚೊಕ್ಕ ಚಿನ್ನ! ಹೀಗೆ ಎಲ್ಲರೂ ಒಂದೊಂದು ಮಾತು ಆಡುವರು. ಆಡಿ ತಮ್ಮ ಮನದ ಆನಂದವನ್ನು ತೋರಿಸುವರು. ಮಕ್ಕಳಂತೂ ಚೆಲುವಿಯ ಬಾಲವನ್ನು ಹಿಡಿದು ಪೀಡಿಸುವರು. ಅದರ ಬಾಯಿಯಲ್ಲಿ ಮೊಗವಿಟ್ಟು ಮಾತನಾಡುವರು. ಮುಳುಗುವ ನೇಸರು ಮರೆಯಾಗುವಾಗಲೆ ಅಗಸ ಬಾಗಿಲ ಸೇರಿದ ಚೆಲುವಿ ಎರಡು ತಾಸು ರಾತ್ರಿ ಯಾದ ಮೇಲೆ ಮನೆಗೆ ಬರುವುದು. ಹುಡುಗರಿಗೆ ಅದೊಂದು ಆಟದ ವಸ್ತು. ಹೊತ್ತು ಮುಳುಗಿದರೂ ಬಾರದೆ ಇದ್ದ ಚೆಲುವಿಯನ್ನು ಕಂಡು ಅಪ್ಪ 'ನೋಡಿಕೊಂಡು ಬರ್ರಿ. ಎಲ್ಲಿ ನಿಂತದೊ ಆ ಹಾಳು ಹಸು. ಮನೆಯ ನೆನಪೇ ಇಲ್ಲ. ಕರು ಒದರುತ್ತದೆ' ಎಂದು ಹೇಳಿದ ಮೇಲೆ ಸಿದ್ದನಿಗೆ ಮನೆ ದಾಟಲು ಪಾವತಿ ಸಿಕ್ಕಂತೆ. ಸಿದ್ದನನ್ನೂ ಚೆಲುವಿಯನ್ನೂ ಕರೆದು ಕೊಂಡು ಬರಲು ಮತ್ತೆ ಯಾರಾದರೂ ಹಿಂದಿನಿಂದ ಹೋಗಬೇಕು. ಲೋಕದ ಮಾನವರಲ್ಲಿ ಮಮತೆಯೆಂಬ ವಸ್ತುವೊಂದು ಇಲ್ಲದಿದ್ದರೆ ಜಗವೆಲ್ಲ ಬರಡಾಗುತ್ತಿತ್ತೇನೋ!

ತಮ್ಮ ಸಿದ್ದನಿಗೆ ಚೆಲುವಿಯೊಂದು ಇದಿರಿನಲ್ಲಿದ್ದರೆ ತೀರಿತು. ಊಟ ವನ್ನು ಮರೆತು ಬಿಡುತ್ತಾನೆ. ಪಾರ್ವತಿಗೆ ಕುಂಬಾರ ಮನೆಯ ತಿಗರಿಯ ಹುಚ್ಚು. ಸಿದ್ದನಿಗೆ ಚೆಲುವಿಯ ಹುಚ್ಚು. ಶಿವನಿಗೆ ಗೌಡರ ಭಾವಿಯಲ್ಲಿ ಮೀಯುವ ಹುಚ್ಚು. ಈ 'ಹುಚ್ಚು' ಎಲ್ಲರಿಗಿಂತಲೂ ಸಿದ್ದನಲ್ಲಿಯೇ ಹೆಚ್ಚಾಗಿ ಮನೆ ಮಾಡಿ ಬಿಟ್ಟಿದೆ. ಹಸುವನ್ನು ಹಿಂಡಿದ ಮೇಲೂ ಅದನ್ನು ಗದ್ದೆಗೆ ಹೋಗಲು ಬಿಡುವುದಿಲ್ಲ ಸಿದ್ದ. ಆತ ಎಲ್ಲಿಯಾದರೂ ಮರೆಯಾದುದನ್ನು ಕಂಡು ಚೆಲುವಿಯನ್ನು ಆಳು ಅಟ್ಟಿಕೊಂಡು ಹೋಗಬೇಕು. ಇಲ್ಲವಾದರೆ ಅದರ ಮೇಲಿನ ಆಧಿಪತ್ಯ ಸಿದ್ದನದೇ! ಅವನ

ಅಷ್ಟಣೆ ಸಿಕ್ಕರೇನೆ ಹುಲ್ಲು ಕಾಣಬೇಕು ಚೆಲುವಿ. ಚೆಲುವಿಗೂ ಸಿದ್ಧನಲ್ಲಿ ಅಷ್ಟೇ ಮಮತೆಯೆಂದು ತೋರುತ್ತದೆ. ಆತ ಕಣ್ಣಿನ ಗೊಂಬೆಯನ್ನು ಮುಚ್ಚಿದರೂ ಸುಮ್ಮನೆ ನಿಂತಿರುತ್ತದೆ ಹುಚ್ಚಿ. ಕರುವಿಗೆ ಹಾಲು ಕುಡಿಸು ವಾಗ ಅದರ ಇದಿರಿನಲ್ಲಿ ನಿಂತುಕೊಂಡು 'ಹೀಗೆ ಸವಿ' ಎಂದು ಅದಕ್ಕೆ ಹೇಳುವನು. ಚೆಲುವಿ ಅದನ್ನು ಕೇಳಬಲ್ಲುದೇನು? ಅವರಿಬ್ಬರಿಗೇ ಗೊತ್ತು!

ಸಿದ್ಧ ಚೆಲುವಿಯರ ಆಟವನ್ನು ಒಂದು ದಿನ ಮರೆಯಲ್ಲಿ ನಿಂತು ಕೊಂಡು ನೋಡಿದೆ. ಮೈಯೆಲ್ಲ ಗುಗ್ಗರಿಗಟ್ಟುತ್ತದೆ, ಆ ಸಂಗತಿಯನ್ನು ಹೇಳುವಾಗ. ಸಿದ್ಧ ಚೆಲುವಿಯೊಡನೆ ಮಾತನಾಡುತ್ತಿದ್ದ. ಅದಕ್ಕೆ ಏನೋ ಹೇಳಿ ಅದರ ಕೊರಲ ಕಣ್ಣಿಯನ್ನು ಬಿಚ್ಚಿ ಓಡಿ ಹೊಸ್ತಿಲ ಮೇಲೆ ಅಡ್ಡಾದ. ಚೆಲುವಿ ಅತ್ತಿತ್ತ ನೋಡಿ ಬಾಗಿಲ ಕಡೆಗೆ ಬಂದಿತು. ನಾನು ಮರೆಯಿಂದ ಹೊರಗೆ ಓಡಿ ಬಂದೆ. ಅಷ್ಟರಲ್ಲಿ ಚೆಲುವಿ ಹೊಸ್ತಿಲ ಮೇಲೆ ಮಲಗಿ ಕೊಂಡ ಸಿದ್ಧನನ್ನು ದಾಟಿ ಹೊರಗೆ ಬಂದು ನಿಂತಿತು. ಇದನ್ನು ನೆನೆದಾಗ ಲೆಲ್ಲ ಹೃದಯ ಕಲಕುತ್ತದೆ.

* * * *

ಒಲಿದ ಜೀವ ಅಗಲುವುದಕ್ಕೂ ಸೃಷ್ಟಿಯ ನಿಯಮವಿರಬೇಕು! ಈ ನಿಯಮಕ್ಕೆ ಸಿದ್ಧ ಚೆಲುವಿಯರು ಅಪವಾದವಾಗಲಿಲ್ಲ. ಸಿದ್ಧ ಒಂದು ದಿನ ಬೇನೆಯಿಂದ ಮಲಗಿದ. ಮಲಗಿದವನು ಏಳಲಿಲ್ಲ. ಚೆಲುವಿಗೆ ಪ್ರಾಣ ಸಂಕಟವಾಯಿತು. ತನ್ನ ಕರುವನ್ನು ಕಂಡಾಗಲೂ ಅದಕ್ಕೆ ನೆಮ್ಮದಿ ಇಲ್ಲ. ಹೊಲಕ್ಕೆ ಹಸಿರು ಮೇಯುವುದಕ್ಕೆ ಹೋಗುವಾಗಲೂ ಪ್ರಜ್ಞೆ ಇರುತ್ತಿರಲಿಲ್ಲ ವೆಂದು ತೋರುತ್ತದೆ. ಎಂದಿನಂತೆ ರಾತ್ರಿ ಮನೆಗೆ ಬರುವ ಚೆಲುವಿ ಸಿದ್ಧ ಬೇನೆಯಿಂದ ಮಲಗಿದಾಗ ದೀಪ ಹಚ್ಚುವ ಹೊತ್ತಿಗೆ ಬರುತ್ತಿತ್ತು. ಅದು ಮುಂದಾಗುವುದನ್ನು ಕಂಡಿತ್ತೊ ಏನೋ! ದೇವತೆಗಳಿಗೆ ಹಿಂದು ಮುಂದು ಗೊತ್ತಂತೆ! ಚೆಲುವಿ ದೇವತೆಯಾಗಿರಬಾರದೇನು?

ಸಿದ್ಧನಿಗೆ ವಾಸಿಯಾಗುವ ಚಿಹ್ನೆ ತೋರಲಿಲ್ಲ. ದಿನವೂ ಮುಖದ ತೇಜ ಮಂಜಾಗುತ್ತ ನಡೆದಿತ್ತು. ಒಂದು ದಿನ ಮುಂಜಾವಿನ ಮಂಜಿನೊಡನೆ

ಸಿದ್ದನು ತಂಪೇರ ತೊಡಗಿದನು. ನಾಡಿ ಒಂದೊಂದೆ ಮೌನವಾಗುತ್ತ ನಡೆ ದಿದ್ದುವು. ಚೆಲುವಿ ಅದನ್ನು ಅರಿತಿದ್ದಳು.

‘ ಚೆಲುವಿ, ಹೊರಗೆ ನಡಿ ’ ಎಂದು ಅದರ ಕಣ್ಣಿ ಬಿಚ್ಚಿ ಆಳು ಹೇಳಿದ. ಅದು ಚಲಿಸಲಿಲ್ಲ. ಸಿದ್ದನ ನೋಟ ಚೆಲುವಿಯ ಮುಖದಲ್ಲಿ. ಚೆಲುವಿಯ ನೋಟ ಸಿದ್ದನ ಮುಖದಲ್ಲಿ. ಒಲವಿನ ಹೊನಲು ಕಾಣದ ಹಾದಿ ಹಿಡಿದಿತ್ತು. ತಲೆಗಿಂಬಿನಲ್ಲಿ ಕುಳಿತ ನಾನು ಕಣ್ಣೀರು ಹಾಕಿದೆ. ಚೆಲುವಿ ಹೊಸ್ತಿಲ ದಾಟಲಿಲ್ಲ. ಆದರೂ ಯಾರೊ ಹೊಡೆದು ಅಟ್ಟಿದರು. ಸಿದ್ದನ ನೋಟ ಆಚೆಗೆ ಹೊರಳಿತು. ಕಣ್ಣು ಅರ್ಧ ಬೆಳ್ಳಗೆ, ಅರ್ಧ ಕಪ್ಪು. ಸಂಜೆಯವರೆಗೂ ಅದೇ ಕನಸು ಕಂಡ ಸಿದ್ದ.

‘ ಏನು ಕನಸು ಕಾಣುತ್ತಿಯೋ ? ’ ಎಂದು ತಾಯಿ ತಮ್ಮನ ಮೇಲೆ ಬಿದ್ದು ಬಿದ್ದು ಅತ್ತರು.

‘ ಕಣ್ಣು ಮುಚ್ಚಿ ಬಿಡು ! ’ ಎಂದು ನಾನು ಆತನ ನೋವನ್ನು ನೋಡದೆ ಅಂದುಬಿಟ್ಟೆ.

‘ ಚೆಲುವಿಯನ್ನು ಕರೆದು ತರ್ರಿ. ಅದಕ್ಕಾಗಿ ಕಾದು ನಿಂತಿದ್ದಾನೆ ’ ಎಂದಳು ಮುದುಕಿಯೊಬ್ಬಳು. ಅಪ್ಪ ಚೆಲುವಿಯನ್ನು ಕರೆದು ತರಲು ಯಾರಿಗೊ ಹೇಳಿದರು. ಸಂದೇಶ ಅದಕ್ಕೆ ಮೊದಲೇ ಮುಟ್ಟಿದಂತೆ ತೋರುತ್ತದೆ. ಬಾಗಿಲ ಬಳಿ ಬಂದಿತ್ತು ಚೆಲುವಿ. ಹೊಸ್ತಿಲಲ್ಲಿ ಕಾಲಿಡುವಾಗಲೆ ಸಿದ್ದ ಅದನ್ನು ತಬ್ಬಿಕೊಂಡು ಗಾಳಿಯಲ್ಲಿ ಗಾಳಿಯಾಗಿ ಹೋದ.

ಚೆಲುವಿ ಸಿದ್ದ ಹೋದ ಮೇಲೆ ಬಹಳ ದಿನ ಬದುಕಲಿಲ್ಲ !

---

# ಶಂಕರನಿಗೆ ದಾಹವಿಲ್ಲ

ಪ್ರೇಮಿ, ಪರದೇಶಿ, ದುಃಖಿ ಇವರಿಗೆ ಈ ಜಗತ್ತಿನಲ್ಲಿ ನೆಮ್ಮದಿಯಾಗಿ ಬಾಳಲು ಅಧಿಕಾರವಿಲ್ಲವೆಂದು ತೋರುತ್ತದೆ. ಬಡತನದ ನೋವು ಸಹಿಸಬಹುದು. ಲೋಕ ಕಲ್ಯಾಣಕ್ಕಾಗಿ ಹಾಲಾಹಲ ನುಂಗಬಹುದು. ಆದರೆ ವಿರಹಿಯ ನೋಟವನ್ನು ನೋಡಲಾಸಲ್ಲ. ಪರದೇಶಿಯ ಗೋಳನ್ನು ಕೇಳಲಾಸಲ್ಲ. ದುಃಖಿಯ ದರ್ಶನವನ್ನು ಸಹಿಸಲಾಸಲ್ಲ. ಜೀವನದಲ್ಲಿ ಕಾಲಿಟ್ಟ ಪ್ರತಿಯೊಬ್ಬನಿಗೂ ಈ ಮಾತಿನ ಅನುಭವ ಸಾಕಷ್ಟು ಬಂದಿರಬೇಕು. ನನ್ನ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಈ ಅನುಭವ ತಾಳ ಹಾಕುತ್ತಿದೆ.

ಶಂಕರ ನನ್ನ ಅಣ್ಣಾಗದಮ್ಮ. ಐದು ವರುಷದ ಮಗು. ಆತನನ್ನು ಬೆನ್ನಿಗೆ ಏರಿಸಿಕೊಂಡು ನಾನು ತಿರುಗಾಡುವುದನ್ನು ನೋಡಿ ತಂದೆ ತಾಯಿ ನಗುವರು. ಅಷ್ಟು ಸಲುಗೆ ಬೇಡ ಎನ್ನುವರು. ಹಸಿವೆಯನ್ನು ಮರೆತು ಬಿಟ್ಟು ನನ್ನೊಡನೆ ಶಂಕರ ಆಡುತ್ತಿರುವಾಗ ತಾಯಿ ಓಡಿ ಹೊರಗೆ ಬರುವರು. 'ಶಂಕರ ಎಲ್ಲಿ ?' ಎಂದು ಕೇಳುವರು. ತಮ್ಮ ಜತೆಗೆ ಕರೆದುಕೊಂಡು ಹೋಗುವರು. ಅಡಿಗೆ ಮಾಡುವಾಗ ಆತನೊಡನೆ ಮಾತನಾಡುತ್ತ ಕುಳಿತುಕೊಳ್ಳುವರು ತಾಯಿ. ಶಂಕರ ಹಿರಿಯನಂತೆ ಕುಳಿತುಕೊಂಡು ಕಣ್ಣು ಬಿಡುವನು. ಶಾಲೆಯಿಂದ ಮರಳಿ ಬಂದು ಅಪ್ಪ 'ಶಂಕರ ಎಲ್ಲಿ ?' ಎಂದು ಪ್ರಶ್ನಿಸುವರು. ತಾಯ ಜತೆಯನ್ನು ಬಿಟ್ಟು ಅಪ್ಪನೊಡನೆ ಸೇರುವನು ಶಂಕರ. ಮನೆಯವರಿಗೆಲ್ಲ ಅಷ್ಟು ಮಮತೆಯ ಮೂರ್ತಿ ಶಂಕರ.

ಶಂಕರ ಬಿಸಿಲಿನಲ್ಲಿ ಆಡುವುದನ್ನು ನೋಡಿ ತಾಯಿ ಬಿಸಿಲು ನಂಜು ಎನ್ನುವರು. ಅಪ್ಪ ಬೆದರಿಸುವರು.

ಒಂದು ದಿನ ಹಗಲೆಲ್ಲ ಬಿಸಿಲಲ್ಲಿ ಮಕ್ಕಳೊಡನಾಡಿ ಶಂಕರ ಸಂಜೆಗೆ ಮನೆ ಸೇರಿದ. ತುಟಿ ಒಣಗಿದ್ದವು. ಮೈ ಸುಡುತ್ತಿತ್ತು. ಉಸಿರು ಕುದಿಯುತ್ತಿತ್ತು. ದಣಿವಿನಿಂದ ಬಳಲಿದವನಂತೆ ನೀರು ಕುಡಿದ. ದಣಿವು ಎಂದು ಮಲಗಿದ.

ತಾಯ ಕರುಳು ಅಷ್ಟಕ್ಕೆ ಕುದಿಯಿತು. ತಂದೆಯ ಮನ ಅಷ್ಟಕ್ಕೆ ತಳಮಳಗೊಂಡಿತು. ನಾವೆಲ್ಲ ಓಡಾಡಿದೆವು.

ಸಂಜೆಯ ಮುಂದಿನ ದಾಹ ನಡುರಾತ್ರಿಗೆ ಏರಿಕೆಯ ಬಿಸಿಲಿನಂತೆ ಹೆಚ್ಚಾಯಿತು. ಮಗನನ್ನು ಮುಸುಕಿನಲ್ಲಿಟ್ಟು ಮಲಗಿಕೊಂಡ ತಾಯಿ ತಾಳಲಾರದ ನೋವು ಎಂದು ಕಣ್ಣೀರು ಹಾಕಿದರು. ಅಪ್ಪ ಕ್ಷಣಕ್ಷಣಕ್ಕೂ ಮೈಮುಟ್ಟಿ ನೋಡುವರು. ಶಂಕರನಿಗೆ ಅರಿವಿರಲಿಲ್ಲ.

' ಬೆಳಗಾಗಲಿ ' ಎಂದರು.

ಶಂಕರನಿಗೆ ನಿಮಿಷಕ್ಕೂ ದಾಹ. ಕಣ್ಣು ಹಾಗೆಯೇ ತೆರೆದಿವೆ. ಬಾಯಿ ಹಾಗೆಯೇ ಬಡಬಡಿಸುತ್ತದೆ. ದಾಹ ! ದಾಹ !

ತಾಯಿ ಎತ್ತಿಕೊಳ್ಳುವರು. ನೀರು ಕುಡಿಸುವರು. ಅಪ್ಪ ಒಳಗೆ ಹೊರಗೆ ಓಡಾಡುವರು.

ಕೋಳಿ ಕೂಗಬಾರದೆ ? ಕತ್ತಲು ಹರಿಯಬಾರದೆ ? ನೇಸರು ಇನ್ನೂ ಏಕೆ ಮೂಡಲಾರ ?

* * * *

ಮುಂಜಾವಿನಲ್ಲಿ ವೈದ್ಯರನ್ನು ಕರೆತಂದೆವು.

' ಕಟ್ಟಿನ ಜ್ವರ ' ಎಂದರು.

' ನೀರಡಿಕೆ ಕ್ಷಣಕ್ಕೂ ಹೆಚ್ಚುತ್ತದೆ. ಉಪಾಯ ಏನು ? ಅಪ್ಪ ಕೇಳಿದರು.

' ನೀರಡಿಕೆ ಕಡಿಮೆಯಾಗುವಂತೆ ಮಾಡಿ ' ತಾಯಿ ಕೇಳಿಕೊಂಡರು.

' ಜ್ವರ ಕಡಿಮೆಯಾದಾಗಲೇ ನೀರು ಕಡಿಮೆ ' ಎಂದರು ವೈದ್ಯರು.

' ಶಂಕರ, ಎಷ್ಟು ನೀರು ಕುಡಿಯುತ್ತೀಯೊ ' ನಾನು ನುಡಿದೆ. ಎಲ್ಲರೂ ಉಸಿರುಗರೆದರು.

ನಾಲ್ಕು ದಿನ ಕಳೆದವು. ಜ್ವರ ಇಳಿಯಲಿಲ್ಲ. ವಾಹ ಕಡಿಮೆಯಾಗಲಿಲ್ಲ.

ಈ ನಾಲ್ಕು ದಿನ ಹೇಗೆ ಕಳೆದವು ? ಸೂರ್ಯ ಹೇಗೆ ಮೂಡಿ ಮುಳುಗಿದ ? ಕೋಳಿ ಕೂಗಿದುವೆ ? ದೇವರಿಗೇ ಗೊತ್ತು. ಐದನೆಯ ದಿನ ಸಂಜೆಗೆ ಶಂಕರನ ದಾಹ ಕಡಿಮೆಯಾಗುತ್ತ ಬಂದಿತು. ದೀಪ ಆರುವಾಗ

ಒಮ್ಮೊಮ್ಮೆ ಹೆಚ್ಚು ಬೆಳಕು ಕೊಡುತ್ತದೆ. ಮುಳುಗುವ ಸೂರ್ಯ ಹರೆಯದ ಸೂರ್ಯನಿಗಿಂತಲೂ ಹಿರಿದಾಗಿ ಕಾಣುತ್ತಾನೆ. ಏಕೆ ಗೊತ್ತೇನು? ದುಃಖಿಗೇ ಗೊತ್ತು.

ದಾಹ ಕಡಿಮೆಯಾಯಿತು. ಮೈಯ ಕಾವೂ ಇಳಿಯಹತ್ತಿತು. ಹಾಗೇಕೆ ? ಶಂಕರನಿಗೆ ಗೊತ್ತು.

ತಣ್ಣಗಾದ ಶಂಕರ. ನೀರು ಕುಡಿಯಲಿಲ್ಲ. ತಾಯಿ ಕುಡಿಸಿದ ನೀರು ಗಂಟಲಲ್ಲಿಯೇ ನಿಂತಿತು. ಮಣ್ಣಿನ ದೇಹ ನೀರು ಬಯಸಲಿಲ್ಲ.

* * * *

ರಾತ್ರಿ ಎಂದಿನಂತೆ ಮನೆಯಲ್ಲಿ ಓಡಾಟವಿಲ್ಲ.

ಶಂಕರನಿಲ್ಲದ ಮನೆ ನಿಸ್ತೇಜವಾಗಿತ್ತು. ಆತನಿಗೆ ನೀರು ಕುಡಿಸಿದ ಕೈ ದಣಿದಿದ್ದವು. ಹಾಸಿಗೆಗೆ ಹೋಗುವಾಗ ಎಲ್ಲರಿಗೂ ಒಂದೇ ಚಿತ್ರ ತೋರುತ್ತಿತ್ತು. ನೀರು ! ನೀರು !! ದಾಹ ! ದಾಹ !!

ಕೋಳಿಯ ಕೂಗು ಕೇಳಿಬರುತ್ತಿತ್ತು. ಕೋಗಿಲೆಯು ಕುಕಿಲುವಂತೆ ಕಿವಿಯಲ್ಲಿ ಸಪ್ಪಳವಾಗುತ್ತಿತ್ತು. ನಿಜವೇನು ? ಪ್ರೇಮಿ, ಪರದೇಶಿ, ದುಃಖಿ ನೀವೆಲ್ಲ ಹೇಳಿ, ನಿಜವೇ ?

ನನಗೆ ನಿದ್ದೆ ಇಲ್ಲ. ಶಂಕರನಿಲ್ಲದ ಬೆನ್ನು ಮೂಳೆಯು ಮಾಟವಾಗಿತ್ತು. ಕಣ್ಣು ಒರಸಿಕೊಂಡು ನೋಡಿದೆ. ಬೆನ್ನು ಮುಟ್ಟಿಕೊಂಡು ನೋಡಿದೆ. ನಾನು ದುಃಖಿ. ನನಗೆ ಹೇಗೆ ಗೊತ್ತಾಗಬೇಕು ? ಆಗ ತಾಯಿ ಕರೆದರು.

‘ ತಮ್ಮಾ ! ಶಂಕರನಿಗೆ ನೀರು ಕೊಡು ’

‘ ಅವ್ವಾ, ಏನದು ?....’

‘ ಶಂಕರನಿಗೆ ನೀರು ಕೊಡು ’

‘ ಅವ್ವಾ ಽ....’

‘ ನೀರು....’

ಎಲ್ಲರಿಗೂ ಎಚ್ಚರ. ತಾಯಿಗೆ ಎಚ್ಚರದಲ್ಲಿಯೂ ಎಚ್ಚರವಿಲ್ಲ. ಎಚ್ಚರಾದವರಿಗೆ ಗೊತ್ತಾಯಿತು.

ಇನ್ನು ಶಂಕರನಿಗೆ ದಾಹವಿಲ್ಲ.

---

# ನನ್ನ ಲೇಖನಿ

ನಾನು ಏನೋ ಬರೆಯುತ್ತ ಕುಳಿತಿದ್ದೆ. ಬರೆಯುವುದರಲ್ಲಿ ಮಗ್ನವಾಗಿದ್ದಾಗ ಶಂಕರ ಬಂದು ಇದಿರಿನಲ್ಲಿ ನಿಂತುದು ನನಗೆ ಗೊತ್ತಾಗಲಿಲ್ಲ. ಆತ ಮಾತನಾಡಿದಾಗಲೆ ಅವನು ಬಂದುದು ತಿಳಿಯಿತು.

'ಅಣ್ಣ........' ಎಂದ ಶಂಕರ.

ಬರೆಯುವುದನ್ನು ನಿಲ್ಲಿಸಿ ತಮ್ಮನ ಕಡೆಗೆ ನೋಡಿದೆ. ಅರ್ಧ ಬೆದರಿದ ಮುಖ. ಅರ್ಧ ಗೆಲವಿನ ಮುಖ.

'ನನಗೂ ಬರೆಯಲು ಕಲಿಸಣ್ಣ'

'ಹೋಗಪ್ಪ ಹೋಗು. ನೀನು ಬರಿಬೇಕಾದರೆ ಹೀಗೇಕೆ ಆಗುತ್ತಿತ್ತು!'

'ನಾನೂ ಸಾಲೆಗೆ ಹೋಗುತ್ತೇನೆ. ಕಲಿಸು.'

'ಹೋಗ್ತಿಯೊ? ನಿಜವೇ? ಹಾಗಾದರೆ ಪಾಟಿ ಇದೆ ಅಲ್ಲಿ. ತಕ್ಕೊಂಡು ಬಾ.'

'ಪಾಟಿ ಬೇಡ. ಕಾಗದದ ಮೇಲೆ ಬರೀತೇನೆ.'

'ಹಾಳಿ ಮೇಲೆ ಬರೀಬೇಕಾದರೆ ನನ್ನಷ್ಟು ಎತ್ತರವಾಗಬೇಕು. ಹೋಗೋ. ಪಾಟಿ ತಗೊಂಡು ಬಾ.'

'ಪಾಟಿ ಒಲ್ಲೆ.'

'ಹಾಗಾದರೆ ಸುಮ್ಮನೇ ಕೂಡು. ನನಗೆ ತೊಂದರೆ ಕೊಡಬೇಡ.'

'ಇಲ್ಲ ನಾನೂ ಬರಿತೇನೆ. ಹಾಳಿ, ಲೇಖಣಿ ಕೊಡು.'

'ಶಂಕರ ಕಾಡಬೇಡ.'

ನನ್ನ ಸಿಟ್ಟಿನ ಮುಖ ಶಂಕರ ನೋಡಿದ. ಮೌನವಾದ. ನಾನು ಮತ್ತೆ ಬರೆಯತೊಡಗಿದೆ. ಶಂಕರ ನಾನು ಬರೆಯುವುದನ್ನು ನೋಡುತ್ತ ಕುಳಿತ. ಮುಖದ ಚಿಹ್ನೆ ಮತ್ತೆ ಮೊದಲಿನಂತೆ ಶಾಂತವಾದಾಗ ಶಂಕರ ನಡುನಡುವೆ ಏನನ್ನಾದರೂ ಕೇಳುತ್ತಿದ್ದ. ಇದೇನು ಅದೇನು ಎಂದು ನಾನು ಬರೆದ ಯಾವುದಾದರೂ ಒಂದು ಅಕ್ಷರದ ಮೇಲೆ ಬೆರಳಿಟ್ಟು ಕೇಳುತ್ತಿದ್ದ. ನಾನು ಹೇಳುತ್ತಿದ್ದೆ. ಮತ್ತೆ ನನ್ನ ಕೆಲಸದಲ್ಲಿ ತೊಡಗುತ್ತಿದ್ದೆ. ಶಂಕರ ಇನ್ನೊಂದು ಪ್ರಶ್ನೆ ಹಾಕಿದ.

'ಅಣ್ಣ, ಈ ಲೇಖನಿಯಲ್ಲಿ ಮಸಿ ಎಲ್ಲಿಂದ ಬರ್‍ತ

'ಅದರ ಹೊಟ್ಟೆಯಿಂದ.'

'ಅದಕ್ಕೂ ಹೊಟ್ಟೆ ಇದೆಯೇನು?'

'ಹೊಂ, ಇಲ್ಲಿ ನೋಡು' ಎಂದು ನಾನು ಬರೆಯುವ ಲೇಖನಿಯಿಂದ ಶಂಕರನ ಹೊಟ್ಟೆಯ ಮೇಲೆ ಗೆರೆ ಎಳೆದೆ. ಜಂಬು ನೀರಲ ಬಣ್ಣ ಆತನ ಹೊಟ್ಟೆಯ ಮೇಲೆ ಮೂಡಿತು. ಶಂಕರ ಅದನ್ನು ಹಸಿಯಿದ್ದಾಗಲೆ ತೀಡಿ ಕೊಂಡು ಮೈತುಂಬ ಮಾಡಿಕೊಂಡ. ಆಗ ಶಂಕರ ಮತ್ತೆ ಪ್ರಶ್ನಿಸ ತೊಡಗಿದ.

'ಈ ಲೇಖನಿ ನನಗೆ ಕೊಡಣ್ಣ.'

'ಶಂಕರ, ಮಾತಾಡುತ್ತ ಮೈಮೇಲೆ ಬರುತ್ತೀಯಲ್ಲೊ?'

'ಕೊಡೋದಿಲ್ಲವೇ, ಅಣ್ಣ'

'ಲೇಖನಿ ತಗೊಂಡು ಏನ್ಮಾಡ್ತಿಯೋ? ಹೊಟ್ಟೆಗೆ ಚುಚ್ಚಿಕೊಳ್ತೀಯಾ?'

'ಬರೀತೇನೆ'

'ಸಾಕು. ನೀ ಬರಿಯೋದು. ನಡಿ ಏಳು. ನಾನು ಬರಿಯೋದು ಮುಗಿಸಿದ ಮೇಲೆ ಇಲ್ಲಿಗೆ ಬಾ' ಎಂದು ಶಂಕರನಿಗೆ ಗದರಿಸಿದೆ. ಅಲ್ಲಿಂದ ಎದ್ದು ಹೋದ. ಆತನ ಹೆಜ್ಜೆಯಲ್ಲಿ ಮಗುವಿನ ಮುದ್ದುತನ ಲಾಸ್ಯವಾಡುವು ದನ್ನು ಕಂಡೆ. ಶಂಕರ ಅಲ್ಲಿಂದ ಹೋದ ಕೆಲಹೊತ್ತಿನ ಮೇಲೆ ಬರೆಯುವು ದನ್ನು ಮುಗಿಸಿದೆ. ಏಕೋ ಸಣ್ಣ ಮಕ್ಕಳ ಜೀವನ ವಿಚಾರ ನನ್ನನ್ನು ಕೆಣಕ ತೊಡಗಿತು. ಚಿಕ್ಕವರಲ್ಲಿ ದೇವನಿಗೆ ಬಹುಪ್ರೀತಿ. ಅವರು ದೇವನ ಮಕ್ಕಳು. ಹಿರಿಯರು ಹೀಗೆ ಹೇಳುವುದನ್ನು ಅನೇಕ ಬಾರಿ ಕೇಳಿದ ನನಗೆ ಆ ಮಾತಿನಲ್ಲಿ ಘನವಿಶ್ವಾಸ ಎಂದಿನಿಂದಲೂ ಬೆಳೆದುಕೊಂಡು ಬಂದಿದೆ. ಮಕ್ಕಳಿಗೆ ಸ್ವರ್ಗದ ಬಾಗಿಲು ತೆರೆದಿರುತ್ತದಂತೆ. ಎಳೆಯರ ಜೀವನದಲ್ಲಿ ಕಣ್ಣಿಟ್ಟು ನೋಡಿದವರು ಈ ಮಾತಿಗೆ ಒಪ್ಪಿಗೆ ಕೊಡದೆ ಇರಲಾರರು. ಶಂಕರ ನನ್ನ ಈ ವಿಚಾರಕ್ಕೆ ಒಂದು ಉದಾಹರಣೆಯಾಗಿ ನಿಂತ.

*　　*　　*　　*

ಮೇಲಿನ ಸಂಗತಿ ಮುಗಿದ ಮೇಲೆ ಕೆಲವು ದಿನ ಕಳೆದವು. ಒಮ್ಮೆ ಬೇನೆಯಿಂದ ಶಂಕರ ಹಾಸಿಗೆ ಹಿಡಿದ. ಬೇನೆ ಬಲವಾಗಿರಲಿಲ್ಲ. ಏನೋ ಒಂದಿಷ್ಟು ಆರೋಗ್ಯದಲ್ಲಿ ಹಿಡಿತ ತಪ್ಪಿರಬೇಕೆಂದು ನನ್ನ ಊಹೆ. ಆದುದರಿಂದ ಅವನ ಆರೋಗ್ಯದ ಬಗೆಗೆ ಹೆಚ್ಚು ಜಾಗರೂಕನಾಗಲಿಲ್ಲ. ನನ್ನ ಕೆಲಸದಲ್ಲಿ ನಾನು ತೊಡಗಿದ್ದೆ. ಅಂದು ನಾನು ಬರೆದಿಟ್ಟ ಲೇಖನಿಯನ್ನು ಎಲ್ಲ ಕಡೆಗೂ ಹುಡುಕಿ ನೋಡಿದೆ. ಎಲ್ಲಿಯೂ ಸಿಗಲಿಲ್ಲ. ಶಂಕರನೇ ಎತ್ತಿ ಹಾಕಿರಬೇಕೆಂದು ಯೋಚಿಸಿ ಅವನನ್ನು ಕೇಳಬೇಕೆಂದು ಆತ ಮಲಗಿದ ತಾಣಕ್ಕೆ ಬಂದೆ. ಏನದು ? ಶಂಕರನ ಮುಖದ ಮೇಲೆ ಏನೋ ತಾಂಡವವಾಡುತ್ತಿದೆಯಲ್ಲ ? ಕಣ್ಣು ಯಾವುದೋ ಲೋಕದಲ್ಲಿ ಸಂಚರಿಸುತ್ತಿವೆಯಲ್ಲ ! ಮುಖದ ಮೇಲಿನ ಕಳೆ ಹೀಗೇಕೆ ? ಯಾವ ವಿಚಾರಕ್ಕಾಗಿ ಹೊಯ್ದಾಡುತ್ತಿದ್ದಾನೆ ಶಂಕರ ? ಆತನನ್ನು ನೋಡಿದ ಕೂಡಲೆ ಜೀವನ ಕೆಳಗು ಮೇಲಾಯಿತು.

'ಶಂಕರ' ಎಂದೆ.

ಮಲಗಿದ್ದ ತಮ್ಮ ಗಪ್ಪನೆ ಎಚ್ಚರಾದ.

'ಅಣ್ಣಾ !' ಎಂದ.

'ನಾನು ಆ ದಿನ ಬರೆದಿಟ್ಟ ಲೇಖನಿ ಎಲ್ಲಿದೆ ? ನೀನು ತಗೊಂಡಿದ್ದೀಯಾ ?'

'ಇಲ್ಲ ಅಣ್ಣ.'

'ಮತ್ತೆಲ್ಲಿ ಹೋಗುತ್ತದೆ ಅದು ?'

'ನಾನು ನೋಡಿಲ್ಲ ಅಣ್ಣಾ.'

'ಇರಲಿ ಬಿಡು. ತಗೊಂಡಿದ್ದರೆ ಕೊಡು. ಮತ್ತೆ ಬೇಕಾದರೆ ನಿನಗೇ ಕೊಡುತ್ತೇನೆ.'

'ಅದನ್ನು ತಕ್ಕೊಂಡು ನಾನೇನು ಮಾಡಲಿ ಅಣ್ಣ ?'

'ನಿನ್ನ ಹೊರ್ತು ಯಾರೂ ಒಯ್ದಿಲ್ಲ. ಕೊಡು. ಬೇಗ ಕೊಡು.'

ಹೀಗೆಯೆ ಬೇನೆಯಿಂದ ಮಲಗಿದ ತಮ್ಮನನ್ನು ಕಾಡಿದೆ. ಆತನನ್ನು ಬೆದರಿಸಿದೆ. ಮಲಗಿಕೊಂಡವನಿಗೆ ತೊಂದರೆ ಕೊಟ್ಟೆ. ಹಸುಳೆ ಮನವನ್ನು

ಶಂಕರ ಸಾಧ್ಯವಾದಷ್ಟು ತೋರಿಸಿದ. ಅದಕ್ಕೇನೆ ಆತನು ದೇವನಲ್ಲಿಗೆ ಹೋದ. ಭಗವಂತ ತನ್ನ ಮೆಚ್ಚಿನ ಮಗುವನ್ನು ನನ್ನ ತಮ್ಮನಾಗಿ ಇರಗೊಡಲಿಲ್ಲ. ನನ್ನ ವರ್ತನೆ ನೋಡಿ ಆತನಿಗೆ ಬೇಸರವಾಯಿತೇನೊ !

* * * *

ಶಂಕರ ಹೋದ ಮೇಲೆ ದಿನವೂ ಮಕ್ಕಳ ವಿಚಾರ ನನ್ನಲ್ಲಿ ಮೂಡಿ ಬಂದು ತಲ್ಲಣಗೊಳಿಸಿಬಿಡುತ್ತಿತ್ತು. ತಲ್ಲಣಗೊಂಡ ಜೀವನಕ್ಕೆ ಶಾಂತಿ ಶಾಂತಿಯೆಂದು ಹೆತ್ತು ಕಡೆಗೆ ಮನ ಚಾಚಿದೆ. 'ನನ್ನೆಡೆಗೆ ಬಾ' ಎಂದು ಗೀತೆ ಕೈ ಬೀಸಿ ಕರೆಯಿತು. ಅದರ ಪುಟ ತಿರುವಿ ನೋಡುತ್ತೇನೆ. ನನ್ನ ಲೇಖನಿ ಒಂದು ಪುಟದಲ್ಲಿ ಅವಿತುಕೊಂಡಿದೆ. ' ಅಳಬೇಡ. ಆತ್ಮನಿಗೆ ಸಾವಿಲ್ಲ ' ಎಂದಿತು.

ಲೇಖನಿ ಎತ್ತಿಕೊಂಡೆ. ಗೀತೆಯನ್ನು ಮುಚ್ಚಿಟ್ಟೆ. ಮನೆ ಬಿಟ್ಟು ಪ್ರಕೃತಿದೇವಿಯ ಸಾಂತ್ವನಕ್ಕೆ ಶರಣು ಹೋದೆ. ಅಡವಿಯನ್ನು ಸೇರಿದೆ. ಹೊಲ ಗದ್ದೆಗಳನ್ನು ದಾಟಿ ಹೋದೆ. ಗಿಡ ಮರಗಳನ್ನು ಹಿಂದಕ್ಕೆ ಸರಿಸಿ ಮುಂದು ಮುಂದಕ್ಕೆ ಹೋದೆ. ಸುತ್ತಲೂ ಜೋಳ ಹೊಡೆ ಹಾಕಿ ನಿಂತಿತ್ತು.

ಒಂದೆಡೆ ಹೋಗಿ ನಿಂತೆ. ಕಿಸೆಯಲ್ಲಿದ್ದ ಲೇಖನಿಯನ್ನು ಕೈಯಲ್ಲಿ ಹಿಡಿದುಕೊಂಡೆ. ಜಗವೆಲ್ಲ ಚೀರಾಡಿದಂತಾಯಿತು. ಆಗ ಕಣ್ಣು ಮುಚ್ಚಿ ಲೇಖನಿಯನ್ನು ಬೀಸಿದೆ !

---

# ಮಕ್ಕಳ ಲೋಕ

ಮೂರು ತಾಸು ಹೊತ್ತೇರಿದಾಗ ನಮ್ಮ ಮನೆಯ ಮುಂದುಗಡೆ ಇರುವ ದಿನ್ನೆಯೊಂದರ ಮೇಲೆ ಸಣ್ಣಮಕ್ಕಳು ಆಟವಾಡುತ್ತಿರುವುದನ್ನು ಕಂಡೆ. ಅಲ್ಲಲ್ಲಿ ಬೆಳೆದ ಹುಲ್ಲು, ಕಂಟಿ, ಕೊಂಪೆ, ಕಲ್ಲು ಬೆಣಚಿ ಆ ದಿನ್ನೆಗೊಂದು ಅವರ್ಣನೀಯವಾದ ಸೌಂದರ್ಯವನ್ನು ಒದಗಿಸಿಕೊಟ್ಟಿದ್ದವು. ಸೂರ್ಯ ಬಾನಿಗೇರುತ್ತ ನಡೆದುದರಿಂದ ಹುಲ್ಲಿನ ಮೇಲೆ ತೇಲುವ ಮಂಜಿನ ಮಣಿಗಳು ಮಾಯವಾಗತೊಡಗಿದ್ದವು. ಎರಡು ಹೊನ್ನರಿಕೆ ಕಂಟಿಗಳು ಮೈ ತುಂಬ ಹೂ ಮುಡಿದುಕೊಂಡು ಬಯಕೆವಡೆದ ಕನ್ನೆಯಂತೆ ಕಂಗೊಳಿಸುತ್ತಿದ್ದವು. ಉದಯ ರವಿಯ ಹೊಂಬೆಳಕಿನಲ್ಲಿ ಕಲ್ಲು ಬೆಣಚಿಗಳು ಮುತ್ತು ಹವಳದಂತೆ ಹೊಳೆಯುತಿದ್ದವು. ಆ ದಿನ್ನೆಯ ಮೂರು ಮಗ್ಗಲಿಗೂ ಏರಿಬಂದ ಗೋಡೆಗಳ ಮೇಲೆ ಗುಬ್ಬಿ ಗೊರವಂಕಗಳು ಹಾರಿ ಬಂದು ಕುಳಿತುಕೊಂಡು ಚಿಲಿಪಿಲಿಗುಟ್ಟುತ್ತಿದ್ದವು.

ನಮ್ಮ ಮನೆಯ ಅಂಗಳದಲ್ಲಿ ನಿಂತುಕೊಂಡು ಅತ್ತ ಕಡೆಗೆ ನೋಡಿದಾಗ ಎಂತಹದೊ ಸುಖ ನನಗೆ ದೊರಕಿದಂತಾಯಿತು. ಅದೊಂದು ರಸಮಯ ಸನ್ನಿವೇಶ! ಓಣಿಯ ಮಕ್ಕಳೆಲ್ಲ ಅಲ್ಲಿ ಕೂಡಿ ಬಂದು ತನ್ಮಯರಾಗಿ ಆಡತೊಡಗಿದ್ದರು. ಸರೋವರದಲ್ಲಿ ಬೆಳೆದ ಸರೋಜದಂತೆ ನಮ್ಮೂರಿನಲ್ಲಿ ಆ ದಿನ್ನೆ ತಲೆಯೆತ್ತಿರುವಂತೆ ನನಗೆ ತೋರಿತು. ಬಾಲಕರ ಆ ಪ್ರಪಂಚ ನನ್ನಿದಿರು ಹೊಸದೊಂದು ಪ್ರಪಂಚವನ್ನೆ ತೆರೆದು ಆನಂದವನ್ನು ತಂದು ಕೊಟ್ಟಿತು. ಅಂತಹ ಆನಂದ ಏನು ಕೊಟ್ಟರೆ ಸಿಕ್ಕೀತು ?

ಅಲ್ಲಿ ನೆರೆದ ಮಕ್ಕಳು ತಮ್ಮದೊಂದು ಜಗತ್ತನ್ನೆ ಕಟ್ಟಿಕೊಂಡಿದ್ದರು. ಹುಲ್ಲಿನೊಡನೆ ಮಾತನಾಡುತ್ತಿದ್ದರು. ಹೊನ್ನರಿಕೆಯನ್ನು ನುಡಿಸುತ್ತಿದ್ದರು. ಕಲ್ಲು ಬೆಣಚಿಗಳನ್ನೆ ಹವಳ ಮುತ್ತುಗಳೆಂದು ಭಾವಿಸಿಕೊಂಡು ಪ್ರಪಂಚದ ವ್ಯವಹಾರವನ್ನು ಸಾಗಿಸುತ್ತಿದ್ದ ಆ ಬಾಲಕರ ಜೀವನ ರೀತಿಯನ್ನು ಕಂಡಾಗ ಮನ ಹಿಗ್ಗಿತು. ಸಂತೋಷ ಉಕ್ಕಿತು.

ಅವರ ಆಟವನ್ನು ತಾಸುಗಟ್ಟಲೆ ನಿಂತಲ್ಲಿಯೆ ನಿಂತು ನೋಡಿದೆ. ಹಸಿವೆ ಮರೆತು, ಬಳಲಿಕೆಯನೀಡಾಡಿ ಮುಗ್ಧ ಪ್ರಪಂಚದಲ್ಲಿ ಮನೆಕಟ್ಟಿ

ಆಡುವ ಆ ಮಕ್ಕಳ ಜೀವನ ನೋಟವನ್ನು ಕಣ್ಣು ದಣಿಯುವನಕೂ ನೋಡಿದೆ.

ಹುಡುಗರು ತಮ್ಮಷ್ಟಕ್ಕೆ ತಾವೆ ಮಾತನಾಡುತ್ತಿದ್ದರು. ನಗುತ್ತಿದ್ದರು. ಪ್ರಸಂಗ ಬಂದಾಗ ಜಗಳಾಡುತ್ತಿದ್ದರು. ಆದರೆ ಜಗಳಾಟದಲ್ಲಿ ದ್ವೇಷಕ್ಕೆ ಇಂಬಿರಲಿಲ್ಲ.

ನಾನು ನಿಂತಲ್ಲಿಂದ ಒಂದೆರಡು ಹೆಜ್ಜೆ ಮುಂದಕ್ಕಿಟ್ಟು ಹೋಗಿ ನೋಡಿದಾಗ ನಮ್ಮ ಶಂಕರನೂ ಅವರ ಬಳಗದಲ್ಲಿದ್ದ. ಅವನು ನನ್ನೆಡೆಗೆ ನೋಡಿರಲಿಲ್ಲ. ನಾನು ಮಾತ್ರ ಅವನನ್ನು ನೋಡಿದೆ. ನನ್ನ ಬರವನ್ನು ಕಂಡು ಶಂಕರ ಕಾಲ್ದೆಗೆಯಬಹುದೆಂದು ಎಣಿಸಿ ಅಷ್ಟಕ್ಕೆ ಹಿಂದಕ್ಕೆ ಸರಿದು ಬಂದು ಕಟ್ಟೆಯ ಮೇಲೆ ಕುಳಿತು ಕಿವಿಯನ್ನು ಅವರೆಡೆಗೆ ಚಾಚಿದೆ.

ಮಕ್ಕಳ ಆಟ ನಡದೇ ಇತ್ತು !

*   *   *   *

ನೇಸರು ನಡುನೆತ್ತಿಯ ಮೇಲೆ ಬಂದಿದ್ದ. ಶಂಕರನಿಗೆ ಇನ್ನೂ ಹಸಿವಾಗಿರಲಿಕ್ಕಿಲ್ಲವೇ ಎಂದುಕೊಂಡೆ. ಅವನನ್ನು ಕರೆಯುವದಕ್ಕೆಂದು ಕುಳಿತಲ್ಲಿಂದ ಎದ್ದು ಹೊರಗೆ ಬರುವಷ್ಟರಲ್ಲಿ ಯಾರದೊ ಹುಡುಗ ಅಳುವುದು ಕೇಳಿ ಬಂದಿತು.

ಎರಡು ಹೊನ್ನರಿಕೆಯ ಕಂಟೆಯ ಮರೆಯಲ್ಲಿ ಇಬ್ಬರು ಹುಡುಗರು ಜಗಳವಾಡುತ್ತ ನಿಂತುಕೊಂಡಿದ್ದರು. ಅವರಲ್ಲಿ ಒಬ್ಬನು ಅಳುತ್ತಿದ್ದ.

' ಶಂಕರಾ ? ' ಎಂದು ಆಗ ನಾನು ಕೂಗಿದೆ.

ಅಳುತ್ತಿರುವ ಹುಡುಗನೇ ಶಂಕರನಾದುದರಿಂದ ನನ್ನ ಕೂಗಿಗೆ ಹಿತವಾದ ಉತ್ತರ ಬರಲಿಲ್ಲ. ಹತ್ತಿರ ಹೋಗಿ ನೋಡಿದೆ. ಹಾದಿಮನೆಯವರ ಹುಡುಗ ರಾಮನು ಶಂಕರನ ಹಣೆಗೆ ಚೂಪಾದ ಕಲ್ಲಿನಿಂದ ಹೊಡೆದಿದ್ದನು. ತಮ್ಮನ ಕೆನ್ನೆಯ ಮೇಲೆ ರಕ್ತ ಧಾರೆಗಟ್ಟಿ ಹರಿಯುತ್ತಿತ್ತು. ಮನೆಗೆ ಹಾಗೆಯೆ ಹೋದರೆ ಏಟು ಬೀಳಬಹುದೆಂದು ಅಂಜಿ ಶಂಕರ ಅಲ್ಲಿಯೆ ನಿಂತುಕೊಂಡು ಅಳುತ್ತಿದ್ದನು.

ನಾನು ಬಂದುದನ್ನು ಕಂಡು ಶಂಕರ ಅಳುವುದನ್ನು ನಿಲ್ಲಿಸಿದ. ಕ್ಷಣಹೊತ್ತು ನನಗೆ ಸಿಟ್ಟು ಬಂದಿತು. ಅದನ್ನು ಕೂಡಲೆ ಬಚ್ಚಿಟ್ಟು ನನ್ನ ತಮ್ಮನಿಗೆ ಹೇಳಿದೆ.

' ಶಂಕರ, ನಿನಗೆ ಹೇಳಿಲ್ಲವೇ ಮನೆಯಲ್ಲಿ ಕೂಡೆಂದು. ಉಡಾಳ ಹುಡುಗರ ಬೆನ್ನುಹತ್ತಿ ಅಪಾಯಕ್ಕೆ ಗುರಿಯಾಗುವುದೊಂದೆ ನಿನಗೆ ಗೊತ್ತು ' ಎಂದೆ.

ಆಗ ಶಂಕರ ತುಟಿ ಬಿಚ್ಚಲಿಲ್ಲ. ಹರಿಯುವ ರಕ್ತವನ್ನು ಅರಿವೆಯಿಂದ ಗಟ್ಟಿಯಾಗಿ ಹಿಡಿದು ನಿಲ್ಲಿಸಿ ತಮ್ಮನನ್ನು ಮನೆಗೆ ಕರೆದೊಯ್ದು ಔಷಧ ಹಚ್ಚಿ ಪಟ್ಟಿ ಕಟ್ಟಿದೆ. ಆ ಮೇಲೆ ಶಂಕರನಿಗೆ ಅಪ್ಪಣೆ ಇಲ್ಲದೆ ಮನೆ ಬಿಡ ಕೂಡದೆಂದು ಆಜ್ಞೆ ಮಾಡಿದೆ.

ಅಂದು ಮಧ್ಯಾಹ್ನ ಊಟ ಮುಗಿಸಿಕೊಂಡು ನಾನು ಓದುತ್ತ ಮಲಗಿ ಕೊಂಡೆ. ಶಂಕರ ನಾನು ಮಲಗಿಕೊಳ್ಳುವುದನ್ನೆ ಹೊಂಚುಹಾಕಿ ಕುಳಿತು ಕೊಂಡಿದ್ದನು. ಎದ್ದು ನೋಡಿದಾಗ ಆತ ಮನೆಯಲ್ಲಿ ಇರಲಿಲ್ಲ.

ಸಂಧ್ಯಾ ಸೂರ್ಯನ ಹೊಂಗಿರಣ ನಮ್ಮೂರ ಮನೆಗಳ ಮಾಳಿಗೆಯ ಮೇಲೆ ಹರಹಿದ್ದವು. ಹೆಂಗಳು ನೀರು ತರುವುದನ್ನು ನಡಸಿದ್ದರು. ಮೇಯುವುದಕ್ಕೆಂದು ಹೊಲಗದ್ದೆಗಳಿಗೆ ಹೋದ ದನಕರುಗಳು ಹಿಂದಿರುಗಿ ಮನೆಗೆ ನಡೆದಿದ್ದವು.

ನಾನು ಹೊರಗೆ ಬಂದು ನೋಡಿದಾಗ ಉದಯದಲ್ಲಿ ಕಂಡ ದೃಶ್ಯ ವನ್ನು ಆಗಲೂ ಕಂಡೆ. ನಮ್ಮ ಮನೆಯ ಇದಿರಿನಲ್ಲಿರುವ ದಿನ್ನೆಯ ಮೇಲೆ ಹುಡುಗರು ಆಟವಾಡುತ್ತಲೇ ಇದ್ದರು.

ಅವರನ್ನು ಸಮೀಪಿಸಿ ನೋಡಿದಾಗ ತಬ್ಬಿಬ್ಬಾಗಿ ಹೋದೆ. ಮುಂಜಾವಿನಲ್ಲಿ ಶಂಕರನ ಹಣೆಗೆ ಕಲ್ಲಿನಿಂದ ಹೊಡೆದ ಆ ಹಾದಿ ಮನೆಯವರ ಹುಡುಗನೂ, ನನ್ನ ತಮ್ಮನೂ ಕೂಡಿಯೆ ಆಡತೊಡಗಿದ್ದರು.

ಅದನ್ನು ಕಂಡು ನನಗೆ ನಾಚಿಕೆ ಬಂದಿತು. ಅಷ್ಟಕ್ಕೆ ಮರಳಿ ಬಂದೆ. ಅವರಿಗೆ ಏನನ್ನೂ ಹೇಳಲಿಲ್ಲ.

* * * *

ರಾಜ್ಯಸಾಮ್ರಾಜ್ಯಗಳಲ್ಲಿ ವಿಪ್ಲವ ಆಗಲಿ. ಸಪ್ತಸಮುದ್ರಗಳು ಅಲ್ಲೋಲಕಲ್ಲೋಲವಾಗಲಿ. ಮಂದಿರ ಚಲಿಸಲಿ. ಮಾರುತ ನಿಲ್ಲಲಿ. ಸೃಷ್ಟಿಯಲ್ಲಿ ಏನೆಂಥ ಬದಲಾವಣೆ ನಡೆದರೂ ನಡೆಯಬಹುದು. ಮಕ್ಕಳ

ಲೋಕದಲ್ಲಿ ಮಾತ್ರ ಬದಲಾವಣೆಗೆ ಸ್ಥಾನವಿಲ್ಲ. ಅದೊಂದು ಬ್ರಹ್ಮ ನಿರ್ಮಿಸಿದ ಅಪೂರ್ವ ಜಗತ್ತು.

ಒಂದು ದಿನ ಶಂಕರ ಮಕ್ಕಳೊಡನಾಡಿ ಮನೆಗೆ ಬಂದಮೇಲೆ ಬೇನೆಯಿಂದ ಹಾಸುಗೆ ಹಿಡಿದ. ಹಾಸುಗೆ ಹಿಡಿದವನು ಮೇಲಕ್ಕೇಳಲಿಲ್ಲ. ಸಾವು ಅವನನ್ನು ಹೆಡಮುರಿಗೆ ಬಿಗಿದು ಕೊಂಡೊಯ್ದಿತು.

ಶಂಕರನನ್ನು ಮಸಣಭೂಮಿಗೆ ಕೊಂಡೊಯ್ಯುವಾಗ ದಾರಿಯಲ್ಲಿ ಅವನ ಓರಿಗೆಯವರು ತಮ್ಮ ತಮ್ಮ ಮನೆಯ ಬಾಗಿಲ ಮರೆಯಲ್ಲಿ ನಿಂತು ನೋಡಿದರು. ಶಂಕರನನ್ನು ಎಲ್ಲಿಗೆ ಒಯ್ಯುತ್ತಾರೆಂದು ಅವರಿಗೆ ಗೊತ್ತಾಗಲಿಲ್ಲ. ತಿರುಗಿ ಅವನು ಬಂದು ತಮ್ಮೊಡನೆ ಆಟಕ್ಕೆ ಸೇರಬಹುದೆಂದು ಅವರೆಲ್ಲ ಎಣಿಕೆ ಹಾಕಿದ್ದರೆಂದು ತೊರುತ್ತದೆ. ಎಷ್ಟು ಸತ್ಯ !

ಶಂಕರನನ್ನು ಮಣ್ಣಿಗೆ ಮರೆಮಾಡಿ ಬಂದ ಮೂರು ದಿನಗಳ ಮೇಲೆ ನಮ್ಮ ಮನೆಯ ಇದಿರಿಗಿರುವ ದಿನ್ನೆಯಮೇಲೆ ಅದೇ ಹುಡುಗರು ಕೂಡಿಕೊಂಡು ಆಟವಾಡುತ್ತಿದ್ದರು. ಅದನ್ನು ಕಂಡಾಗ ನನ್ನ ಕರುಳು ಕಾಳು ಕುದಿದಂತೆ ಕುದಿಯಿತು. ತೇಲಿಬಂದ ದುಃಖವನ್ನು ತಳ್ಳಿ ಒಳಗೆ ಹೋದೆ. ಅಲ್ಲಿಯೂ ಸಮಾಧಾನ ಉಂಟಾಗಲಿಲ್ಲ. ನಾನು ನೋಡಿ ದುಃಖ ಮರೆಯಲೆಂದು ಮತ್ತೆ ಹೊರಗೆ ಬಂದೆ. ಬಾಗಿಲ ಬಳಿ ಹಾದಿಮನೆಯವರ ಹುಡುಗ ರಾಮು ತಲೆ ಕೆಳಗೆ ಮಾಡಿಕೊಂಡು ನಿಂತಿದ್ದ. ನಾನು ಬಂದುದನ್ನು ಕಂಡು ‘ಶಂಕರಎಲ್ಲಿ ? ಆಟವಾಡುತ್ತೇವೆ !’ ಎಂದು ಕೇಳಿದ. ಅವನ ಪ್ರಶ್ನೆಗೆ ಉತ್ತರ ಏನೆಂದು ಹೇಳಲಿ ?

ಉತ್ತರ ಹೇಳುವುದಾಗಲಿಲ್ಲ. ಮುಗಿಲಕಡೆ ಮುಖವೆತ್ತಿ ಹುಚ್ಚುನಗೆ ನಕ್ಕು ಬೇರೆ ಕಡೆಗೆ ಹೊರಟು ಹೋದೆ.

ಅವನಿಗೆ ಏನು ಅರ್ಥವಾಯಿತೋ ? ಹಸುಳೆ ಮನವ ನೋಯಿಸಿದೆನೇ ನಾನು ?

* * * *

ಎರಡು ತಿಂಗಳ ಮೇಲೆ ನಾನು ಮತ್ತೊಂದು ದುಃಖದ ವಾರ್ತೆ ಕೇಳಿದೆ. ಹಾದಿಮನೆಯವರ ಹುಡುಗ ಬಿಲುಕುತ್ತಿನ ಬೇನೆಯಿಂದ ಬಳಲಿ ಸತ್ತು ಹೋದನು !

ಊರಿನ ಮಕ್ಕಳು ರಾಮುವನ್ನು ಮಸಣಕ್ಕೆ ಒಯ್ಯುವಾಗ ಮತ್ತೆ ಮರುಗಿದರು. ಕಣ್ಣೀರು ಕರೆದರು. ಏಕೆ ಅವರಿಗೆ ದುಃಖ ಉಂಟಾಯಿತೆಂಬುದಾಗಿ ಕೇಳಿದರೆ ಮಾತ್ರ ಸರಿಯಾಗಿ ಉತ್ತರ ಹೇಳರು. ರಾಮು ತಿರುಗಿ ಬಾರನಂತೆ ! ಏಕೆಂದರೆ ಶಂಕರ ಬರಲಿಲ್ಲವಲ್ಲ !

ದಿನದಿನವೂ ಸಂಜೆ ಮುಂಜಾವಿನಲ್ಲಿ ನಮ್ಮ ಮನೆಯ ಇದಿರಿನಲ್ಲಿರುವ ಆ ದಿನ್ನೆಯ ಮೇಲೆ ಓಣಿಯ ಹುಡುಗರು ಆಡುವುದಕ್ಕೆಂದು ಬಂದು ಕೂಡಿರುತ್ತಾರೆ. ಮನೆ ಕಟ್ಟಿ ಆಡುತ್ತಾರೆ. ಹೊಲ ಬಿತ್ತಿ ಒಕ್ಕುತ್ತಾರೆ. ನಗುವುದು, ಅಳುವುದು, ಜಗಳಾಡುವುದನ್ನು ನಡಸಿಯೇ ಇರುತ್ತಾರೆ.

ಹೊಸಬರು ಬರುವರು. ಹಳಬರು ತೆರಳುವರು. ಆದರೆ ನಮ್ಮೂರ ಮಕ್ಕಳ ಲೋಕದಲ್ಲಿ ಬದಲಾವಣೆ ಮಾತ್ರ ಏನೂ ಇಲ್ಲ.

ಒಂದು ದಿನ ಮುಂಜಾವಿನಲ್ಲಿ ಎದ್ದು ನೋಡಿದಾಗ ಮಕ್ಕಳು ಆಡುತ್ತಿದ್ದರು. ಎಲ್ಲಾ ನಿತ್ಯದಂತೆ ನಡೆದಿತ್ತು. ಆದರೆ ಸೃಷ್ಟಿಯಲ್ಲಿ ಸ್ಥಿತ್ಯಂತರ ಆಗಿತ್ತು.

ಮಕ್ಕಳು ಆಡುವ ದಿನ್ನೆಯ ಮೇಲಿನ ಎರಡು ಹೊನ್ನರಿಕೆ ಗಿಡಗಳು ಮಾತ್ರ ಒಣಗಿದ್ದವು !

---

# ದರ್ಶನ

ಶ್ರಾವಣಮಾಸದ ಮುಂಜಾವು. ನಾವೆಲ್ಲ ಮನೆಯ ಒಳಗೆ ಶೇಖರನ ಹಾಸುಗೆಯ ಬಳಿ ಕುಳಿತುಕೊಂಡಿದ್ದೆವು. ಬೇನೆಯ ತೊಡೆಯ ಮೇಲೆ ಮಲಗಿದ ಮಗುವಿನ ಉಪಚಾರ ನಡದೇ ಇದ್ದಿತು. ಆಗ ಬಾಗಿಲಲ್ಲಿ ನಿಂತು ಯಾರೋ ಕೂಗುವದು ಕೇಳಿ ಬಂದಿತು.

ತಾಯಿ ಎದ್ದು ಹೋಗಿ ನೋಡಿದರು. ನಾನೂ ನೋಡಿದೆ. ಭಿಕ್ಷುಕನೊಬ್ಬ ಹೊಸ್ತಿಲ ಬಳಿ ನಿಂತುಕೊಂಡಿದ್ದನು. ತಲೆಯಲ್ಲಿ ಜಡೆಗಟ್ಟಿದ ಕೂದಲು. ಮೈಗೆ ಕೇವೆಯ ಬಟ್ಟೆ. ಕೈಯಲ್ಲಿ ಬೆತ್ತ, ಜೋಳಿಗೆ. ಅವನ ಮುಖದಲ್ಲಿ ಎಂತಹದೋ ತೇಜ ಮಿನುಗುತ್ತಿತ್ತು. ಕಣ್ಣುಗಳಲ್ಲಿ ಹೊಸ ನೋಟ ಎದ್ದು ತೋರುತ್ತಿತ್ತು. ಅವನನ್ನು ನೋಡಿದಾಗ ಹೊತ್ತಿಗೆ ಸರಿಯಾಗಿ ಬಂದವನಲ್ಲ ಎಂದೆನ್ನಿಸಿತು ನಮಗೆ. ಕಷ್ಟಕಾಲದಲ್ಲಿ ಯಾರಿಗೂ ಅಂತಹ ಆಶೆ ಹುಟ್ಟಲೇ ಬೇಕು. ಅದು ತಪ್ಪಲ್ಲ.

ತಾಯಿ ಭಿಕ್ಷೆ ನೀಡಿದರು. ನೀಡುವುದಾದ ಮೇಲೆ ಭಿಕ್ಷುಕನಿಗೆ ಕೇಳಿದರು. ಜೀವ ತಡೆಯಲಿಲ್ಲವೆಂದು ತೋರುತ್ತದೆ. 'ಮಗನಿಗೆ ಮೈಯಲ್ಲಿ ನೆಟ್ಟಗಿಲ್ಲ. ದಿನ ಬೆಳೆದಂತೆ ರೋಗ ಹೆಚ್ಚುತ್ತಿದೆ. ಉಪಾಯ ಹೇಳಿ ಬದುಕಿಸುವ ದಾರಿ ತೋರುತ್ತೀರಾ?' ಎಂದು ಅವನಿಗೆ ಪ್ರಶ್ನಿಸಿದರು ತಾಯಿ.

'ತಾಯಿ, ನಾವೇನು ಮಾಡೇವು? ಆತನ ಇಚ್ಛೆಯಂತೆ ನಾವು ಸಾಗುವದೊಂದೇ ಉಪಾಯ. ಆದರೂ ಒಂದು ವೈದ್ಯ ನನಗೆ ಗೊತ್ತಿದ್ದಂತೆ ಹೇಳಬಲ್ಲೆನಮ್ಮಾ!'

'ಏನದು ಹೇಳಿ ಅಪ್ಪ! ಮಗ ವಾಸಿಯಾಗುವುದೊಂದೆ ಸಾಕು. ನೂರು ವೈದ್ಯರೆಲ್ಲ ಮುಗಿದರು. ಕೊನೆಯದೊಂದು ಆಗಲಿ.

'ಮಗುವಿನ ಹೆಸರೇನು ತಾಯಿ?'

'ಶೇಖರ'.

'ಹಾ, ಸರಿಹೋಯಿತು. ಮೂಡುವ ಸೂರ್ಯನಿಗೆ ಮಗನನ್ನು ಬದುಕಿಸೆಂದು ಪ್ರಾರ್ಥಿಸಿರಿ. ಬಟ್ಟಲಲ್ಲಿ ನೀರು ಹಾಕಿ ಮೂಡಲು ಬೆಟ್ಟದೆಡೆ ಮುಖ

ವೆತ್ತಿ ಸೂರ್ಯನಿಗೆ ತೋರಿಸಿರಿ. ಅದೇ ನೀರು ಮಗನ ಬಾಯಲ್ಲಿ ಹಾಕುವುದಮ್ಮ. ವಾಸಿ ಆದೀತೆಂದು ನಂಬುತ್ತೇನೆ. ಮಂಗಲ. ಹೋಗುತ್ತೇನೆ.'

ಭಿಕ್ಷುಕ ಇಂತು ನುಡಿಯುತ್ತಲೇ ಹೊರಟು ಹೋದ. ತಾಯಿ ಅಂಗಣದಲ್ಲಿ ಬಂದು ನಿಂತು ಆಗಸದೆಡೆಗೆ ನೋಡಿದರು. ಸೂರ್ಯ ಮೋಡದ ಪಡೆಯಲ್ಲಿ ಅವಿತುಕೊಂಡಿದ್ದನು. ಆತ ಬೇಗ ಹೊರಗೆ ಬಂದು ತಾಯಿಗೆ ದರ್ಶನ ಕೊಡುವ ಲಕ್ಷಣವೊಂದೂ ತೋರಲಿಲ್ಲ. ಅದೆಷ್ಟೊ ಹೊತ್ತು ಮುಗಿಲ ಕಡೆ ತಾಯಿ ನೋಡಿಯೇ ನೋಡಿದರು. ಕೊನೆಗೊಂದು ನಿಟ್ಟುಸಿರು ಬಿಟ್ಟು ನನ್ನನ್ನು ನೋಡಿ ಹೇಳಿದರು.

'ನೀನು ಇಲ್ಲಿಯೇ ಇರು. ಸೂರ್ಯ ಬಂದಾಗ ನನ್ನನ್ನು ಕೂಗು.' ತಾಯಿ ಹೇಳಿದ ಈ ಮಾತನ್ನು ಪಾಲಿಸುವದಕ್ಕೆಂದು ಮನೆಯಂಗಣದ ಕಟ್ಟೆಯ ಮೇಲೆ ಕುಳಿತೆ. ತಾಸಾಯಿತು. ಎರಡು ತಾಸಾಯಿತು. ಹಕ್ಕಿ ಹಾರಿದಂತೆ ಹೊತ್ತು ಸಾಗುತ್ತಲೇ ಇದ್ದಿತು. 'ರವಿ ಏಕೆ ಬಾರನೊ' ಎಂದು ಉಸಿರುಗರೆದೆ. ಸೂರ್ಯನ ಬರವನ್ನು ನೂರೊಂದು ಬಾರಿ ಪ್ರಾರ್ಥಿಸಿದೆ. ಆದರೆ ಅದೆಲ್ಲ ಅರಣ್ಯರೋದನವಾಯಿತು. ನಾವು ಬೇಡಿದ ವಸ್ತುವೆಲ್ಲ ಕೈಗೆ ಬಂದರೆ ಬ್ರಹ್ಮನ ಸೃಷ್ಟಿ ಬ್ರಹ್ಮನಿಗಾಗದೇ ಹೋದೀತು

ನೇಸರು ಮೋಡದಿಂದ ಹೊರಗೆ ಬರುವ ಸುಳಿವನ್ನು ಕಾಣದೆ ನಿರಾಶೆಗೊಂಡು ಕುಳಿತಾಗ ಗೆಲವಿನ ಕಿರಣವೊಂದನ್ನು ಕಂಡೆ. ಮೆಲ್ಲಮೆಲ್ಲನೆ ಸೂರ್ಯ ತಿಮಿರ ಗರ್ಭದಿಂದ ಹೊರಗೆ ಬರುವಂತೆ ತೋರಿತು. ಆಗಲೆ ನಾನು ತಾಯಿಯನ್ನು ಕೂಗಿದೆ. ಅವರು ಬಂದು ನೋಡಿದಾಗ ರವಿ ಮತ್ತೆ ಮರೆಯಾಗಿದ್ದ. ನೊಂದ ದನಿಯಲ್ಲಿ ತಾಯಿ ಏನೊ ಹೇಳುತ್ತ ಮಗನ ಆರೈಕೆಗಾಗಿ ಒಳಗೆ ತೆರಳಿದರು.

ಸೂರ್ಯ ಇಡಿಯ ದಿನವೆಲ್ಲ ಕಾಣಲಿಲ್ಲ. ಭಿಕ್ಷುಕ ಹೇಳಿದ ಔಷಧ ಶೇಖರನ ಬಾಯಿಗೆ ಬರಲಿಲ್ಲ. ಅಂತಿರಬೇಕು, ಕರ್ತಾರನ ಆಜ್ಞೆ.

ಉದಯ ರವಿಯ ದರುಶನಕ್ಕಾಗಿ ರಾತ್ರಿಯನ್ನೆಲ್ಲ ಹೇಗೊ ಕಳೆದದ್ದಾಯಿತು. ಕೋಳಿ ಕೂಗುವದು ಕೇಳತೊಡಗಿತು.

## ದರ್ಶನ

ಕೊನೆಯ ಯತ್ನವೆಂದು ನಮ್ಮ ಮನೆಯ ಮುಂದಿರುವ ದಿನ್ನೆಯ ಮೇಲೆ ನಿಂತುಕೊಂಡು ಮೂಡುವ ಸೂರ್ಯನನ್ನು ಒಂದೆ ನೋಟದಿಂದ ಅವಲೋಕಿಸುತ್ತಿದ್ದೆ. ಅಗೋ ಬಂತು ಸುಮುಹೂರ್ತ !

ತಾಯಿ ಬಟ್ಟಲಲ್ಲಿ ನೀರನ್ನು ಹಾಕಿಕೊಂಡು ಬಂದು ಮೂಡಲೆಡೆ ಏರಿ ಬರುವ ಸೂರ್ಯನಿಗೆ ಕೈಮುಗಿದು ಬಟ್ಟಲನ್ನು ತೋರಿದರು. ಆಗ ಅವರಿಗೆ ಹೋದ ಜೀವ ತಿರುಗಿ ಬಂದಂತಾಯಿತು. ಎಷ್ಟು ಉತ್ಸಾಹದಿಂದ ಮಗನೆಡೆಗೆ ಓಡಿ ಹೋದರು ತಾಯಿ !

ಶೇಖರ ತಾಯ ಬರವನ್ನು ಕಣ್ಣಲ್ಲಿಯೇ ಜೀವ ಹಿಡಿದುಕೊಂಡು ಬಗೆದೆರೆದು ನೋಡುತ್ತಿದ್ದ. ಮಾತು ಬಾರದ ಹಸುಳೆಯ ಮನ ಏನನ್ನೊ ಹೇಳುತ್ತಿದ್ದಿತು. ನಮಗದು ಅರ್ಥವಾಗಲಿಲ್ಲ.

ತಾಯಿ ವಿಶ್ವಾಸದಿಂದ ತಾವು ತಂದ ನೀರನ್ನು ಮಗನ ಬಾಯಲ್ಲಿ ಹಾಕಿದರು. ಅಷ್ಟೊತ್ತಿಗೆ ಕಾರ್ಯ ಕೈ ಮೀರಿ ಹೋಗಿತ್ತು. ಸೂರ್ಯ ನಾರಾಯಣನ ಹರಕೆಯನ್ನು ಪಡೆದು ತಾಯಿ ತಂದ ನೀರು ತಮ್ಮನ ಗಂಟಲಲ್ಲಿಯೇ ನಿಂತಿತು. ಸೂರ್ಯ ಮೂಡುವುದನ್ನೇ ಶೇಖರ ನೋಡುತ್ತಿದ್ದ !

ಮುಂದೆ ಕೆಲಕಾಲದ ಮೇಲೆ ಶೇಖರನನ್ನು ಮನೆಯಿಂದ ಹೊರಗೆ ತಂದರು. ಒಬ್ಬನಿಗೂ ಕೂಡ ಭಾರವಾಗಿರಲಿಲ್ಲ, ಅವನ ತಂಪು ದೇಹ.

ಅಗಸೆಯ ಒಡ್ಡನ್ನು ಇಳಿದು, ಮಾದಿಹಳ್ಳವನ್ನು ದಾಟಿ ಸುಡುಗಾಡದೆಡೆ ಬಂದು ನಿಂತಾಗ ದೂರ ದೂರದಲ್ಲಿ ಒಂದು ದೃಶ್ಯವನ್ನು ನಾನು ನೋಡಿದೆ. ತಾಯಿ ಕಂಡರೊ ಇಲ್ಲವೊ ?

ಶೇಖರನನ್ನು ಮಣ್ಣಿನಲ್ಲಿ ಮುಚ್ಚುತ್ತಿದ್ದರು. ನೇಸರು ಆಗಸದ ನಡು ನೆತ್ತಿಯ ಕಡೆಗೆ ಧಾವಿಸಿ ಬರುತ್ತಿದ್ದನು. ಪೂರ್ವ ದಿಗಂತದಲ್ಲಿ ರವಿ ಏರಿ ಬರುವ ತಾಣದಲ್ಲಿ ಭಿಕ್ಷುಕನೊಬ್ಬನು ಕಾಲಗರ್ಭದಲ್ಲಿ ಅಡಗುವುದಕ್ಕೆಂದು ಸಜ್ಜಾಗಿದ್ದನು. ಎಂತಹ ದರ್ಶನ ಅದು !

---

# ಶೂನ್ಯದೊಡನೆ !

'ನಾವು ಒಂಬತ್ತು ಮಂದಿ' ಎನ್ನುವ ಕಥೆಯನ್ನು ಓದುತ್ತ ಮಲಗಿ ಕೊಂಡಂತೆಯೆ ಕಣ್ಣು ಮುಚ್ಚಿದವು. ಎಲ್ಲಿ ಹೋಯಿತೊ ಆ ಹಾಳು ಜೀವನದ ದುಗುಡ ದುಮ್ಮಾನ! ಹೊಟ್ಟೆ ಬಟ್ಟೆಯ ಚಿಂತೆ ಎಲ್ಲಿ ಹೋಯಿತೊ ! ದಾಸ್ಯದ ಭಾರವನ್ನು ಹೊತ್ತು 'ಹೋ' ಎಂದು ಮರುಗುತ್ತಿರುವ ಬೆನ್ನಿನ ಬಳಲಿಕೆ ಯಾವ ಕಡೆ ಕಾಲು ಕಿತ್ತಿತೊ! ಹಾ, ಎಂಥ ಸುಂದರ ಲೋಕವದು !

ಬಾನಂಗಣದ ನಡುವಣ ಪ್ರದೇಶದಲ್ಲಿ ಚಂದಿರ ಕಂಕಣ ಕಟ್ಟಿ ಸರಗೆರೆ ಯನ್ನಾಡುತ್ತಿದ್ದನು. ಭೂ ಲೋಕ ವ್ಯೆಯೆಲ್ಲ ಕಣ್ಣಾಗಿ ನೋಡುತ್ತಿತ್ತು. ಅದನ್ನು ನೋಡುತ್ತಲೆ ನನಗೆ ಕುಳಿತಲ್ಲಿಯೆ ಕುಳ್ಳಿರಲಾಗಲಿಲ್ಲ. ಸರಿ. ನಾಲ್ಕು ದಿಕ್ಕಿನಿಂದಲೂ ಈ ಸಲವಿನ ನೋಟವನ್ನು ಕಾಣಬೇಕೆಂದು ಬಯಸಿ ಹಾಸುಗೆ ಬಿಟ್ಟು ಬಯಲ ದಾರಿಯನ್ನು ಹಿಡಿದೆ. ಹೆಜ್ಜೆ ಹೆಜ್ಜೆಗೂ ಹಾಲಿ ನೊರತೆಗಳು, ಹೊದೋಂಟಗಳು, ಅರಮನೆಗಳು. ಭೂತಳದಲ್ಲಿ, ಬಾಂದಳ ದಲ್ಲಿ ಏನೆಂಥ ಸೊಬಗು !

ನಡೆದೆ. ಇನ್ನೂ ನಡೆದೆ. ದೂರದಲ್ಲಿ ಒಂದು ಸುಂದರ ಉಪವನವನ್ನು ಕಂಡೆ. ಅದರ ನಡುವೆ ರಮ್ಯ ಸೌಧವೊಂದಿತ್ತು. ಮನ ಏಕೋ ಕೆರಳಿತು. ಕಾಲು ಏಕೋ ಧಾವಿಸಿದವು. ಏನಲ್ಲಿ ? ಯಾರಲ್ಲಿ ?

ಉದ್ಯಾನದ ನಡುವಿರುವ ಮಲ್ಲಿಗೆಯ ಮಂಟಪದಲ್ಲಿ ಯಾರೋ ಇರುವದು ಕಂಡಂತಾಯಿತು. ಅರಮನೆಯ ಮುಂದೆ ಹಾಯ್ದು ಒಂದು ಮಂಟಪದೆಡೆಗೆ ಬಂದೆ. ಜನರ ಸುಳಿವು ಎಲ್ಲಿಯೂ ತೋರಲಿಲ್ಲ. ಮಂಟಪ ದಲ್ಲಿ ಯಾರೋ ಕುಳಿತಿದ್ದರು. ಮಾತನಾಡಿಸೋಣವೆ ಎಂದುಕೊಂಡೆ. ಚಿತ್ತಕ್ಕೆ ಏನು ಬುದ್ಧಿ ಹೊಳೆಯಿತೊ! ಮೈ ಜುಮ್ಮೆಂದಿತು. ಮಂಟಪದ ಹತ್ತಿರ ಬರುತ್ತಲೆ ಕಾಲು ತಣ್ಣಗಾದವು. ಹೂವಿನ ರಾಶಿಯನ್ನು ಮುಂದಿರಿಸಿ ಕೊಂಡು ಹುಡಿಗೆಯೊಬ್ಬಳು ಹೂ[illegible]ನೊಡನೆ ಆಟವಾಡುತ್ತ ಕುಳಿತಿದ್ದಳು.

ಅದನ್ನು ನೋಡಿ ಹಾಗೆಯೆ ಹಿಂದಿರುಗಲಿ ಎಂದುಕೊಂಡೆ. ಇಂತಹ ವಿಸ್ತೀರ್ಣವಾದ ಸುರಮ್ಯವಾದ ಪ್ರದೇಶದಲ್ಲಿ ಈ ಹುಡುಗಿಯೊಬ್ಬಳೆ ಹೇಗೆ ಕುಳಿತಿದ್ದಾಳಲ್ಲ ಎಂದು ಬಾಯಲ್ಲಿಯೇ ನುಡಿದು ನುಂಗುತ್ತಿದ್ದಂತೆ ನಾಲ್ಕು ಹೆಜ್ಜೆ ಹಿಂದಕ್ಕಿಟ್ಟೆ. ಆಗ ಅವಳು ನಕ್ಕಳು. ಇದೇನು ಭೂತ ಚೇಷ್ಟೆ ಆಗಿರ ಬಹುದೇ ಎಂದು ಊಹಿಸಿದೆ. ಏನಾದರೂ ಇರಲಿ. ಧೈರ್ಯಗುಂದದೆ ಈ ಸಮಯವನ್ನಿದಿರಿಸಬೇಕೆಂದು ಮನಸ್ಸು ಮಾಡಿ 'ನೀನಾರು ತಂಗೀ?' ಎಂದು ಕೇಳಿದೆ.

'ಹ್ಹ! ಹ್ಹ! ಹ್ಹ!' ಎಂದು ಆಕೆ ಗಹಗಹಿಸಿ ನಕ್ಕಳು.

'ನಿನ್ನ ಹೆಸರೇನು ತಂಗೀ?' ಇನ್ನೂ ಧೈರ್ಯದಿಂದ ಆಕೆಯನ್ನು ನುಡಿಸಿದೆ.

ಆಕೆ ಬಿದ್ದು ಬಿದ್ದು ನಗತೊಡಗಿದಳು.

'ಹೇಳಬಾರದೆ? ನಿನ್ನ ಹೆಸರೇನಪ್ಪಾ?'

'ಇಷ್ಟು ಬೇಗನೆ ಮರೆವೇ, ನಿಮಗೆ?'

'ಮರೆವು.... ? ನೀನಾರಮ್ಮ? ಪರಿಚಯ ಹತ್ತದು.'

'ತಾಯಿ ಹಾಲು ಒಡಹುಟ್ಟಿದವರಿಗೆ ಒಂದೆ ರೀತಿಯಾಗಿ ಪರಿಣಮಿಸು ವುದಿಲ್ಲವೇ? ಒಂದಕ್ಕೆ ನಂಜು ಇನ್ನೊಂದಕ್ಕೆ ಅಮೃತವಾಗಬಲ್ಲುದೇ?'

'ಯಾವ ಸಂಬಂಧ ನಿನ್ನದು? ಹೇಳುವುದನ್ನು ನೇರವಾಗಿ ಹೇಳು.' ನನ್ನ ಮಾತು ಬಿರುಸಾಗಿಯೇ ಬಂದಿತು. ಹುಡುಗಿ ಅಂಜಿದಳು. ಕಣ್ಣು ತೀಡಿಕೊಂಡಳು. ತನ್ನ ಇದಿರಿನಲ್ಲಿ ಕುಳಿತುಕೊಳ್ಳಲು ಕೇಳಿಕೊಂಡಳು. ಕುಳಿತೆ. ಕುಳಿತವನಿಗೆ ಹೇಳತೊಡಗಿದಳು.

"ಏಳು ವರುಷಗಳ ಸಂಬಂಧ. ಮಾನವನ ಜೀವಿತದಲ್ಲಿ ಅದೊಂದು ಭಯಂಕರ ಅವಧಿ. ಹುಗಿದಿಟ್ಟ ಹೊನ್ನಕೊಡವೂ ಕೂಡ ತಾಣವನ್ನು ಬದಲಿಸುತ್ತದೆ. ತಂದೆ ಮಕ್ಕಳ ಗುರುತನ್ನು ತಪ್ಪಿಸುತ್ತದೆ. ಒಡಹುಟ್ಟಿದವರ ಸಂಬಂಧವನ್ನು ವಿಚ್ಛೇದಿಸುತ್ತದೆ. ಆ ಏಳು ವರುಷಗಳ ಅವಧಿ ನಿಮ್ಮ ಮೇಲೆ ಸಾಕಷ್ಟು ಮರವೆಯ ಮುದ್ರೆಯನ್ನು ಮೂಡಿಸಿದೆ.

" ಏಳು ವರುಷಗಳ ಹಿಂದಿನ ಮಾತು. ಒಂದು ದಿನ ಸಂಜೆಗೆ ನಿಮ್ಮನ್ನು ಕಾಣಲು ಬುತ್ತಿಯ ಗಂಟನ್ನು ಕಟ್ಟಿಕೊಂಡು ಮನೆ ಬಿಟ್ಟೆ. ಮನೆ ಬಿಡುವಾಗ ಎಂಥದೊ ಒಂದು ವೇದನೆಯಾಯಿತು. ಅದನ್ನು ಈ ಮಾತಿನಲ್ಲಿ ಹಿಡಿದು ನಿಲ್ಲಿಸುವುದು ಸಾಧ್ಯವಿಲ್ಲ. ದಾರಿಯುದ್ದಕ್ಕೂ ಹಗಲುಗನಸುಗಳನ್ನು ಕಂಡೆ. ಗಾಳಿಗೋಪುರ ಕಟ್ಟಿದೆ. ಚಂದಿರ ಸೂರ್ಯರನ್ನು ಚಂಡಿನಂತೆ ಹಿಡಿದು ತೂರಾಡಿದೆ. ಸೌಂದರ್ಯ ! ಸತ್ಯ ! ಒಂದೇ ಲೋಕ. ಅದೊಂದೇ ಜಗತ್ತು. ಮಕ್ಕಳೆಲ್ಲ ಅಮೃತ ಪುತ್ರರು. ಬಂಧು ಬಳಗವೆಲ್ಲ ಸಾವನೀಡಾಡಿದವರು. ಆ ಪ್ರಪಂಚವನ್ನು ಬಿಟ್ಟು ನಿಮ್ಮತ್ತ ನಡೆದಾಗ ದಾರಿದಾರಿಗೂ ಕಳೆದ ಸವಿ ದಿನಗಳನ್ನು ನೆನಪು ಮಾಡಿಕೊಳ್ಳುತ್ತ ಮುಂಬರುವ ದಿನಗಳ ಸೌಖ್ಯವನ್ನು ಮೆಲುಕು ಹಾಕುತ್ತ ನಡೆದಿರುವಾಗ ನಾ ಪಡೆದ ಸೌಭಾಗ್ಯವೇನದು !

" ಹೀಗೆ ನಡೆದಿರುವಾಗ ವೇಳೆ ಎಂತು ಗತಿಸಿತೊ ! ದಾರಿ ಎಂತು ಸಾಗಿತೊ ! ನನಗೆ ಒಂದೂ ತಿಳಿಯದು. ಬೆಳಕು ಬಂದು ಬೆಳಕು ಹೋಯಿತು. ಆಗಸದಲ್ಲಿ ಒಮ್ಮಿಂದೊಮ್ಮೆಲೆ ಕಾರ್ಮೋಡಗಳು ಕವಿದು ಬಂದವು. ಗಿಡಮರಗಳು ಚೀರಾಡಿದವು. ಜತೆಗೆ ಆತ್ಮಸಾಗರವೂ ಅಲ್ಲೋಲ ಕಲ್ಲೋಲವಾಗತೊಡಗಿತು. ಏನು ಪ್ರಳಯವೋ ಎಂದುಕೊಂಡೆ. ಏನು ಭವಿತವ್ಯವೋ ಎಂದು ಊಹಿಸಿದೆ. ಆದರೂ ಮಾರ್ಗಕ್ರಮಣವನ್ನು ಮುಂದುವರಿಸಿಯೇ ಇದ್ದೆ. ಕೂಗಳತೆಯಲ್ಲಿ ಒಂದು ಸರೋವರ ಕಂಡಿತು. ಕಮಲಗಳು ಹೊಡೆ ಹಾಕಿ ನಿಂತಿದ್ದವು. ಇನ್ನಾವ ಹೂವಿಗೂ ಅಲ್ಲಿ ಆಸ್ಪದವಿರಲಿಲ್ಲ. ಸಮೀಪಿಸಿ ಬರುವಷ್ಟರಲ್ಲಿ ಕಮಲಗಳೆಲ್ಲ ಕೈ ಬೀಸಿ ಕರೆದವು. ಎಲ್ಲಿಯ ಬಾಂಧವ್ಯವೊ ಎಂದು ಲೆಕ್ಕ ಹಾಕಿದೆ. ಅವು ಮುಗುಳು ನಗೆ ನಕ್ಕು ಏನೊ ಸಂದೇಶ ಬೀರಿದವು. ಆ ಸಂದೇಶವನ್ನು ಅದಕ್ಕೂ ಮೊದಲು ಎಲ್ಲಿಯೊ ಕೇಳಿದಂತಿತ್ತು. ಬೇಗನೆ ನೆನಪಾಗಲಿಲ್ಲ. ನೆನಪಾಗದಿದ್ದುದೂ ಸಂತೋಷಕ್ಕಾಗಿಯೇ ಎಂದುಕೊಂಡೆ. ಒಂದೆಡೆ ಸರೋವರದ ದಂಡೆಯ ಮೇಲೆ ನೀಳವಾಗಿ ಅರಳಿ ನಿಂತ ಕಮಲದ ದೇಟು ನೆರಳು ಚಾಚಿತ್ತು. ಕಾರ್ಮಿಂಚು ಸೆಳೆಸೆಳೆದು ಬರುವುದನ್ನು ಕಂಡು ಆಶ್ರಯಕ್ಕೆಂದು ಆ ದೇಟಿನ ನುಗ್ಗುಲಲ್ಲಿ ಬಂದು ನಿಂತೆ. ಕವಿದ ಮುಗಿಲು ಬೆಳ್ಳಗಾಯಿತು. ದೇವರ

ಮಕ್ಕಳು ಕೂಗತೊಡಗಿದರು. ಕಲಾಯೋಗಿ-ವೈಣಿಕನ ಬೆರಳ ಮಿಡಿತಕ್ಕೆ ರಸಿಕರು ತುಂಬಿ ತುಳುಕಾಡುವಂತೆ ನನ್ನ ಹೊಯ್ದಾಡುವ ಹೃದಯ ಶಾಂತಿಯನ್ನು ಪಡೆಯಿತು. ಆ ನಿಮಿಷವನ್ನು ಸೆರೆಹಿಡಿದು ನಿಲ್ಲಿಸಬೇಕೆಂದು ಮಾಡಿದೆ. ಅಂತಹ ಭಾಗ್ಯ ನನ್ನದಿರಲಿಲ್ಲ. ಕಣ್ಣುಗಳು ತೇಲಿದುವು. ಕ್ಷಣ ಹೊತ್ತು ನನ್ನನ್ನು ನಾನೇ ತಿಳಿಯದೆ ಹೋದೆ.

" ಕನಸಿನೊಳಗೊಂದು ಕನಸು. ಹಿಂದಣ ಜೀವನದ ಚಿತ್ರ ಮನದ ಕಣ್ಣಿನ ಮುಂದೆ ಹಕ್ಕಿಯಂತೆ ಹಾರಿ ಹೋಯಿತು. ಬಾಣದಂತೆ ಇರಿದು ಹೋಯಿತು. ಎಂತಹ ನೆನಪದು ! ಎಂತಹ ವೇದನೆಯದು ! ಜೀವನವನ್ನು ಕಲ್ಮಷ ಮನದಿಂದ ನೋಡದ, ಹಾಲುಗಲ್ಲದ ಹುಡುಗೆ ನಾನಾಗಿದ್ದೆ. ತಂದೆ ತಾಯಿಗಳಿಗೆ ನಾನೊಬ್ಬಳೇ ಮಗಳು. ನನಗೆ ಹಸಿವಾಗದಿದ್ದರೆ ಹಲುಬುವಳು ತಾಯಿ. ನನಗೆ ನಿದ್ರೆ ಬಾರದಿದ್ದರೆ ನೋಯುವನು ತಂದೆ. ಅವರ ಮೋಹ ಅವರದೇ ಸರಿ. ಎಂತಹ ಹುಚ್ಚರು ! ಹೆತ್ತವರನ್ನು ಈ ರೀತಿಯಿಂದ ಕಠೋರವಾಗಿ ಹುಚ್ಚರು ಎಂದು ಸಂಬೋಧಿಸುವಲ್ಲಿ ಅರ್ಥವಿದೆ. ಅದನ್ನೆ ತಿಳುಹಿಸಲು ಈಗ ಮುಂದುವರೆಯುತ್ತೇನೆ. ಗೊಂಬೆಗೆ ಮದುವೆ ಮಾಡಿ ಆನಂದದಿಂದ ಕಾಲಹರಣ ಮಾಡುತ್ತ ಬೆಳೆಯುವ ಮಗಳನ್ನು ನೋಡಿ ತಂದೆ ತಾಯಿಗಳಿಬ್ಬರೂ ಮಚ್ಚರಗೊಂಡರು. ತಂದೆ ತಾಯಿಗಳಿಗೂ ಮಕ್ಕಳ ವಿಷಯದಲ್ಲಿ ಮತ್ಸರವುಂಟೇ ಎಂದು ನೀವು ಕೇಳೀರಿ. ಕೇಳುವುದು ಸಹಜವೆ. ನನ್ನ ಬಾಲ್ಯದ ಸುಖಮಯ ದಿನಗಳಿಗೆ ಕಲ್ಲುಹಾಕ ಬಯಸಿದರು. ಸಚ್ಚಿದಾನಂದವೆಂಬ ಆಡುಂಬೊಲಕ್ಕೆ ಬೇಲಿಯನ್ನು ಬಡೆಯಲೆಳಸಿದರು. ಒಂದು ದಿನ ಹಾಸುಗೆಯಲ್ಲಿ ಇನ್ನೂ ಕಣ್ಣು ತೀಡುತ್ತ ಮಲಗಿದ್ದೆ. ಮನೆಯಂಗಣದಲ್ಲಿ ಮಂಗಲ ವಾದ್ಯಗಳು ಮೊಳಗತೊಡಗಿದ್ದವು. ನಿಬ್ಬಣದ ಬಂಡಿಗಳು ಸಾಲು ಸಾಲಾಗಿ ಬಂದು ಆ ವಾದ್ಯಗಳಿಗೆ ಉತ್ತರ ಕೊಟ್ಟವು. ಏಳು ತಾಸು ಹೊತ್ತೇರಿರಲಿಲ್ಲ. ನನ್ನ ಬಲಗಡೆ ಯುವಕನೊಬ್ಬನು ಕಣ್ಣು ಮಿಟುಕಿಸುತ್ತ ಕುಳಿತಿದ್ದನು. ಇದಿರಿನಲ್ಲಿ ಆಚಾರ್ಯನೊಬ್ಬ ಏನನ್ನೊ ಪಠಿಸುತ್ತಿದ್ದನು. ಬೆರಗುವಟ್ಟು ನೋಡುತ್ತಿದ್ದಂತೆಯೆ ಕೊರಳಲ್ಲಿ ಕರಿಮಣಿಯ ಸರವನ್ನು ಕಟ್ಟಿದರು. ' ಆಃ ! ಬಯಲೇ ! ' ಎಂದು ಉಸಿರುಗರೆದೆ.

" ಏಳು ವರುಷಗಳ ನಂತರ ನನ್ನ ಕೊರಳಲ್ಲಿ ಕಟ್ಟಿದ ಸರದ ಬಗೆಗೆ ವಿಚಾರಗಳು ಮನದಲ್ಲಿ ಮೂಡಿ ಮುಳುಗತೊಡಗಿದವು. ಹೂಗಳಿಗಾಗಿ ಆಸೆ ಮಾಡಿದೆ. ಕೌಮುದಿಯ ಸೊಬಗಿಗಾಗಿ ಬಾಯಿ ತೆರೆದೆ. ಪಕ್ಷಿಗಳ ಕಲಕಲಾಟಕ್ಕಾಗಿ ಕಣ್ಣು ಬಿಟ್ಟೆ. ಎಂದಿನಂತೆ ಮುಡಿಯ ಸಿಂಗಾರಕ್ಕಾಗಿ ಹೂಗಳನ್ನು ಪವಣಿಸುತ್ತ ಕುಳಿತಾಗ ಬಯಲು ಬಿರಿಯುವಂತೆ ತಾಯ ಅಳುವ ಸ್ವರವು ಕೇಳ ಬಂದಿತು. ಕೈಯಲ್ಲಿದ್ದ ಹೂವಿನ ಸರ ಹರಿಯಿತು. ತಂದೆಯವರು ಬಂದು ಕೊರಲನ್ನು ಸುತ್ತಿ ನಿಂತಿದ್ದ ಕರಿಮಣಿಯ ಸರವನ್ನು ಬಿಚ್ಚಿದರು. ' ಉಃ ! ಬಯಲೇ ! ' ಎಂದು ಉಸಿರುಗರೆದು ಬಯಲ ಸೇರಿದೆ. ಅದರ ಸಂಗಕ್ಕಾಗಿ ನಾಡಾಡಿ ಜನ ಹೇಸುತ್ತಿದೆಯಲ್ಲ !

" ಹಿಂದಣ ಜನುಮದ ಈ ಚಿತ್ರ ನೆನಪಾಗುತ್ತಲೆ ಮನವು ಹಿಂದಿರುಗ ಲೆಳಸಿತು. ಆದರೆ ನೀವೆಲ್ಲ ನನಗಾಗಿ ಕಾಯ್ದು ನಿಂತಿರಬಹುದೆಂದು ಊಹಿಸಿದೆ. ಆ ಸರೋವರದ ದಂಡೆಯ ಮೇಲೆ ನೆರಳು ಚಾಚಿ ನಿಂತಿದ್ದ ಕಮಲದ ದೇಟಿನ ಆಶ್ರಯದಿಂದ, ಅಗಲಿ ಬರಬೇಕೆಂದು ಎದ್ದು ನಿಂತೆ. ಬುತ್ತಿಯ ಗಂಟನ್ನು ನೋಡಿದೆ. ಅದು ಅಲ್ಲಿರಲಿಲ್ಲ. ಏನು ವೈಚಿತ್ರ್ಯವೊ ಎಂದು ಮೊಗವೆತ್ತಿ ನೋಡಿದೆ. ಓಹೋ ! ಕಮಲದ ದೇಟಿನ ಕೊನೆಯಲ್ಲಿ ಅರಳಿ ನಿಂತ ಹುವ್ವಿನ ಮಧ್ಯದಲ್ಲಿ ನಿಂತುಕೊಂಡ ದಿವ್ಯ ಮೂರ್ತಿಯೊಂದು ನನ್ನ ಬುತ್ತಿಯ ಗಂಟನ್ನು ಬಿಚ್ಚಿ ತಿನ್ನತೊಡಗಿತ್ತು. ಅದರ ಮೇಲಿರುವ ನನ್ನ ಒಡೆತನಕ್ಕಾಗಿ ಕೂಗಾಡಿದೆ. 'ಆಶ್ರಯ ಕೊಟ್ಟವನಿಗೆ ಬುತ್ತಿಯ ಗಂಟು ಸಲ್ಲಲೇ ಬೇಕು. ' ಎಂಬ ಉತ್ತರ ಬಂದಿತು.

" ಒಡಲಿಗಾಗಿ ಆಶ್ರಯ ಕೊಟ್ಟವನು ಒಡಲನ್ನು ಬಯಸಿದನು. ನನಗಾಗಿ ಕಾಯ್ದು ನಿಂತ ನಿಮ್ಮೆಲ್ಲರ ಚಿತ್ತವನ್ನು ಕೆರಳಿಸಬಾರದೆಂದು ತಿಳಿದು ನಿಮಗೆ ನನ್ನ ದರುಶನ ಕೊಡಲು ಓಡಿ ಓಡಿ ಬಂದೆ. ನಾನು ಮಾತ್ರ ನಿಮ್ಮನ್ನು ಕಾಣಲಿಲ್ಲ. ದಾರಿಯ ದಣಿವಿನಿಂದ ನನ್ನ ಕಂಗಳು ಇಂಗಿದ್ದವು. ಆತ್ಮದ ಹಸಿವೆಯಿಂದ ನನ್ನ ಒಡಲು ಬೆಂದಿತ್ತು. ರಾತ್ರಿ ಒಂಬತ್ತು ಗಂಟೆ ಯಾಗಿತ್ತು. **ಗರ್ಭದಲ್ಲಿ ಸತ್ತು ಬಂದ ಶಿಶುವನ್ನು** ನೀವೆಲ್ಲ ಕಂಡಿರಿ.

" ನನ್ನ ಸಹವಾಸಕ್ಕಾಗಿ ನೀವೆಲ್ಲ ಮೊಗದಿರುಹಿದಿರಿ. ಬೆಂದ ಒಡಲಿಗೆ ಬಯಲು ತೋರಿದಿರಿ. ಇಂಗಿದ ಕಣ್ಣಿಗೆ ಮಣ್ಣು ತೂರಿದಿರಿ. ನನ್ನ ಭಾಗ್ಯವೆಂದೆ.

" ಅಣ್ಣಾ ! ಓ, ಅಣ್ಣಾ ! ಅಂಜಬೇಡ. ನಾನು ನಿಮ್ಮ ಕೊನೆಯ ತಂಗಿ. ತಾಯ ಗರ್ಭದಿಂದ ಬರುವಾಗಲೆ ನಿರ್ಜೀವಿಯಾಗಿ ಬಂದೆ. ಈಗಲಾದರೂ ನೆನಪಾಯಿತೇ ? ಹ್ಞ ! ನೆನಪಾಯಿತೇ ?

ನೀವು ನನ್ನನ್ನು ಮಣ್ಣಿಗೆ ಮರೆ ಮಾಡಿ ಇಂದಿಗೆ ಏಳು ವರುಷಗಳು ತುಂಬಿದವು. ಪ್ರಕೃತಿಮಾತೆಯ ಆರೈಕೆಯಿಂದ ಇಂದು ಇಷ್ಟು ದೊಡ್ಡವಳಾಗಿ ಬೆಳೆದಿದ್ದೇನೆ. ಬಯಲ ಸೇರುವ ಜೀವ ಬಯಲ ಬಯಸಬೇಕು. ಅಣ್ಣಾ, ಜಗವು ಶೂನ್ಯ ! ಜಗದ ಮಕ್ಕಳೂ ಶೂನ್ಯ ! ಆ ಶೂನ್ಯದೊಡನೆ ಪ್ರಪಂಚದ ಮಾತು ಕತೆ ನಡೆಯಲಿ ! "

ಹೀಗೆಂದು ಹೇಳಿ ಆ ಹುಡುಗಿ ಎದ್ದಳು. ಎದ್ದವಳೆ ನಾಗಾಲೋಟಕ್ಕೆ ಮೊದಲು ಮಾಡಿದಳು. ಹಾಲುಗಡಲಿನ ಸೀಮೆಯಲ್ಲಿ ದೂರ ದೂರ ನಡೆದು ಕರಗಿ ಹೋದಳು. 'ತಂಗೀ ! ತಂಗೀ ! ತಂಗೀಽ !' ಎಂದು ಅವಳಿಗಾಗಿ ಕೂಗಿದೆ. ಕಣ್ಣೀರು ಕರೆದೆ. ಉಪ್ಪು ನೀರಿನಿಂದ ತೊಯ್ದ ಮುಖ ಮತ್ತೆ ಜೀವನದ ನೆನಪು ಮಾಡಿಕೊಟ್ಟಿತು.

ಮತ್ತೊಮ್ಮೆ 'ನಾವು ಒಂಬತ್ತು ಮಂದಿ' ಎನ್ನುವ ಕತೆಯನ್ನು ಮೆಲುಕಾಡಿಸಿದೆ.

---

# ಯುಗಾದಿ ಬಂದಾಗ !

ಹೆಹ್ಹೋ ! ಯುಗಾದಿ !

ರಾತ್ರಿ ಹಾಸಿಗೆಗೆ ಹೋಗುವಾಗ ತಾಯಿ ನಮಗೆಲ್ಲ ಹೇಳಿದರು.

' ಬೇಗ ಮಲಗಿಕೊಳ್ಳಿರಿ. ಬೆಳ್ಳಿ ಮೂಡಿದ ಕೂಡಲೆ ಎರೆದುಕೊಂಡು ಊಟ ಮಾಡಿ ' ರತ್ನ ' ನೋಡಲು ಹೋಗುವಿರಂತೆ ! '

' ಎಷ್ಟೊತ್ತಿಗೆ ಏಳಬೇಕು ಅಪ್ಪ ? ಎಲ್ಲರಿಗಿಂತಲೂ ನಾನೇ ಮೊದಲು ಎರೆದುಕೊಳ್ಳುತ್ತೇನೆ ' ಎಂದು ಸಿದ್ದ ತನ್ನ ಬೇಡಿಕೆ ಮುಂದು ಮಾಡಿದ.

' ಆಗಲಿ ಸಿದ್ದ, ನೀನೆ ಮೊದಲು, ಅಪ್ಪ ! ' ತಾಯಿ ಸಿದ್ದನನ್ನು ಸಂತಯಿಸಿದರು.

' ನಾನು ಮೊದಲು ಅಪ್ಪ. ಪಾರು ನಾನು ಕೂಡಿಯೆ ಮೈ ತೊಳೆದು ಕೊಳ್ಳುತ್ತೇವೆ. ' ಶಂಕರ ತನ್ನ ಪಾಲಿಗಾಗಿ ಹಾರಯಿಸಿದ.

' ಪಾರು ಎಲ್ಲರಿಗಿಂತಲೂ ಹಿಂದುಗಡೆ ಎರೆದುಕೊಳ್ಳುತ್ತಾಳೆ. ಶಂಕರ ಸಿದ್ದ ನೀವಿಬ್ಬರೂ ಜತೆಯಾಗಿ ಬರ್‍ರಿ ' ತಾಯಿ ಅವರಿಬ್ಬರನ್ನೂ ಹೀಗೆ ಹೇಳಿ ರಮಿಸಲೆಳಸಿದರು.

' ಇಲ್ಲ. ನಾನೇ ಮೊದಲು. ' ಶಂಕರ ತನ್ನ ಎಳೆತನದ ಅಧಿಕಾರ ಚಲಾಯಿಸಿದ.

' ಹಾಗೇ ಮಾಡು ಶಂಕರ ! ' ತಾಯಿ ಮತ್ತೆ ಅವನನ್ನು ಸಂತಯಿಸಿ ದರು.

' ನಾನು ಒಲ್ಲೇ ಒಲ್ಲೆ. ನನಗೆ ಮೊದಲು ಜಳಕವಾದ ಮೇಲೆ ಶಂಕರನ ಸರತಿ ' ಸಿದ್ದ ಸವಾಲು ಹಾಕಿಯೇ ಬಿಟ್ಟ.

ಹೀಗೆ ತಾಯಿಯ ಮುಂದೆ ಸಿದ್ದ ಶಂಕರರ ' ನ್ಯಾಯ ' ನಡೆಯಿತು. ನಾನು ಸುಮ್ಮನೆ ಕೇಳುತ್ತಿದ್ದೆ. ಶಿವು, ಲಿಂಗು, ನಾನು ಹಿರಿಯರು. ನಮ ಗೇನು ? ಅವರ ಅಪ್ಪಣೆಯಂತೆ ನಾವು ನಡೆಯಲೇ ಬೇಕು. ಆದರೆ ಸಿದ್ದ

ಶಂಕರರ ನಿಯಮ ಹಾಗಲ್ಲ. ಅವರು ಹೇಳಿದಂತೆ ತಾಯಿ ನಡೆಯಲೇ ಬೇಕು. ಊಟದ ಹೊತ್ತಿನಲ್ಲಿ ಅವರು ಅಳು ತೆಗೆದರೆ ಹಬ್ಬಕ್ಕೆ ಮೆರುಗೇ ? ಹಬ್ಬದ ದಿನವಂತೂ ತಾಯಿ ಅವರನ್ನು ಹೂವಿನಂತೆ ನೋಡಿಕೊಂಡು ಹೋಗಲೇ ಬೇಕು. ಪಕಳೆ ಹರಿದರೆ ಹೂ ಚಂದ ಕಾಣುತ್ತದೆಯೇ ? ತಾಯಿ, ಮಕ್ಕಳ ನ್ಯಾಯವನ್ನು ಕುರಿತು ತೀರ್ಪು ಕೊಟ್ಟರು. ಶಂಕರನಿಗಿಂತ ಸಿದ್ದ ಹಿರಿಯ. ಸಿದ್ದನಿಗೆ ಕಿವಿಯಲ್ಲಿ ಏನೋ ಹೇಳಿದರು. ಆತ ಒಮ್ಮೆಲೇ ನಗುತ್ತ ' ಹ್ಞಾಂ. ಹಾಗೇ ಆಗಲಿ. ಶಂಕರನಿಗೇ ಮೊದಲು ಜಳಕ. ನನಗೆ ಆ ಮೇಲೆ ' ಎಂದ. ಶಂಕರನಿಗೆ ಕಳ್ಳತನ ತಿಳಿದಿತ್ತು. ತಾಯಿ ಕಲಿಸಿದ ಸವಿ ಅದು. ' ನನಗೂ ಕೊಡು ಬೆಲ್ಲ. ಇಲ್ಲವಾದರೆ ನಾನು ಏಳುವುದೇ ಇಲ್ಲ ' ಎಂದ. ಸರಿ. ಕಾರ್ಯ ಪೇಚಾಟಕ್ಕಿಟ್ಟುಕೊಂಡಿತು. ತಾಯಿ ಸದ್ಯಕ್ಕೆ ಇಬ್ಬರಿಗೂ ಬಾಯಿ ಬೆಲ್ಲ ಕೊಟ್ಟು ಸಮಾಧಾನ ಹೇಳಿದರು. ನಮ್ಮನ್ನು ಮಲಗಿಸಿ ಹೋಗುವಾಗ ಮತ್ತೆ ಕೇಳಿದರು.

' ಪಾರ್ವತಿ ಎಲ್ಲಿ ? ಪಾರ್ವತೀ....? '

ನನ್ನ ಮುಸುಕಿನಲ್ಲಿ ಹುದುಗಿಕೊಂಡಿದ್ದಳು ಪಾರ್ವತಿ.

' ಪಾರ್ವತೀ ! ಪಾರ್ವತೀ ! ಎರೆದುಕೊಳ್ಳುವುದೆಂದರೆ ಎಷ್ಟು ಬೇಸರ ಈಕೆಗೆ ! ' ತಾಯಿ ಇಂತು ಮತ್ತೆ ಕೂಗಿದರು.

ನನ್ನ ಹತ್ತಿರ ಅಡಗಿಕೊಂಡಿದ್ದ ಪಾರ್ವತಿ ಒಂದಿಷ್ಟು ಅಲುಗಾಡಿದಳು.

' ಓ ಗೊಡ್ತೀಯೋ ಇಲ್ಲೀ ? '

' ಥ್ಹ. ಇಲ್ಲೇ ಅದೇನಿ. '

ನನಗೆ ನಗು ತಡೆಯಲಾಗಲಿಲ್ಲ. ಪಾರ್ವತಿ ಹೊದೆದುಕೊಂಡ ಶಾಲಿ ನಲ್ಲಿಯೇ ಉಸಿರುಗರೆದಳು. ಅವಳಿಗೆ ಎರೆದುಕೊಳ್ಳುವುದೆಂದರೆ ಪ್ರಾಣ ಸಂಕಟ. ತಲೆ ತುಂಬ ಎಣ್ಣೆ ಹಚ್ಚಿ ಕೂದಲು ಬಾಚಿ ಬಿಸಿ ನೀರು ಹೊಯ್ದು ಕೊಳ್ಳುವುದೆಂದರೆ ಹಾವಿನ ಬಾಯಿಂದ ಹೊರಗೆ ಬರಲೆಳಸುವ ಕಪ್ಪೆಗೆ ಯಾವ ಸಂಕಟವೋ, ಆ ಸಂಕಟ ಆಕೆಗೆ. ಹಬ್ಬದ ದಿನಗಳು ಸಮೀಪಿಸುವು ದನ್ನು ಕಂಡು ಪಾರ್ವತಿಗೆ ತಲೆ ಬೇಸರ. ಹಬ್ಬ ಬರಲಿ. ಬೇಕಾದಷ್ಟು ಬರಲಿ. ಆದರೆ ತಲೆ ಎರೆದುಕೊಳ್ಳುವ ದಿನ ಬೇಡ. ಪಾರ್ವತಿ ಎರೆದು

ಕೊಳ್ಳುವ ಸಂಜೆಗೆ ಎಲ್ಲಿಯಾದರೂ ಕದ್ದು ಅಡಗಿಕೊಳ್ಳುವಳು. ತಾಯ ಕಣ್ಣು ತಪ್ಪಿಸುವಳು. ನನಗೆ ದೈನ್ಯದಿಂದ ಬೇಡಿಕೊಳ್ಳುವಳು. ‘ ಅಣ್ಣ, ಅವ್ವನಿಗೆ ಇಲ್ಲೆಂದು ಹೇಳಿ ಬಿಡು ! ’ ಅವಳ ಈ ಬೇಡಿಕೆ ಕೇಳಿ ನನಗೆ ಹಿಡಿಸಲಾರದ ನಗು ಬಂದರೂ ಅದು ತುಟಿಯ ಮೇಲೆ ಮಾತ್ರ ಆಡುತ್ತಿತ್ತು. ಅದಕ್ಕೇನೆ ತಾಯಿ ಪಾರ್ವತಿಗೆ ಹೇಳಿದರು. ‘ ನೀನು ಇಲ್ಲಿ ಬೇಡ, ಬಾ. ನನ್ನ ಹತ್ತಿರ ಮಲಗಿಕೊ. ಬೇಗ ಎಬ್ಬಿಸಿ ಎರೆಯುತ್ತೇನೆ ’ ಎಂದರು ತಾಯಿ. ನನ್ನ ಹತ್ತಿರ ಮಲಗಿದ ಪಾರ್ವತಿಯನ್ನು ಎಬ್ಬಿಸಿಕೊಂಡು ಹೋದರು. ಇಷ್ಟೊತ್ತಿಗೆ ಸಿದ್ದ ಶಂಕರರು ನಿದ್ದೆ ಹೋಗಿದ್ದರು. ಶೇಖರ ಇನ್ನೂ ತೊಟ್ಟಿಲ ಕೂಸು. ಅವನಿಗೆ ಏನೂ ಗೊತ್ತಿಲ್ಲ. ಅವನನ್ನು ಕೇಳುವವರು ಯಾರೂ ಇಲ್ಲ. ಅವನು ತನ್ನ ಬೇಡಿಕೆಯನ್ನು ಮುಂದು ಮಾಡುವ ಹಾಗೂ ಇಲ್ಲ. ಅವನೇ ಪಟ್ಟದ ಕೂಸು.

*    *    *    *

‘ಕು....ಕೂ....ಕೂss’ ಎಂದು ಕೋಳಿ ಕೂಗಲು ಈಗೀಗ ಪ್ರಾರಂಭ.

ಎಲ್ಲಿಯೊ ಒಂದು ಮುದಿ ಕೋಳಿ ಬೇಗ ಎಚ್ಚತ್ತು ಕೂಗಿತು. ಆಗ ಬಳಗವೇ ಎದ್ದು ಕೂಗತೊಡಗಿದವು.

ಬೆಳ್ಳಿ ನಮ್ಮೂರ ಒಕ್ಕಲಿಗರಿಗೆ ಆಜ್ಞೆ ಮಾಡುತ್ತಿತ್ತು. ತಾಯಿ ನಮ್ಮೆಲ್ಲರನ್ನು ಎಬ್ಬಿಸಿದರು. ಹುಮ್ಮಸ್ಸಿನಿಂದ ಎದ್ದೆವು.

ಹೆ ಹ್ಹೋ ! ಯುಗಾದಿ !

ಮೈಗೆಲ್ಲ ಎಣ್ಣೆ ತೀಡಿಕೊಂಡೆವು. ತಾಯಿ ಕಿವಿಯಲ್ಲಿ ಎಣ್ಣೆ ಹಾಕಿದರು. ಬೆನ್ನು ತೀಡಿದರು. ಒಬ್ಬೊಬ್ಬರನ್ನೆ ನೀರ ಮನೆಗೆ ಕರೆದುಕೊಂಡು ಹೊಸ ಹುರುಪು ತುಂಬಿ ಕಳುಹಿಸಿದರು. ಸಿದ್ದ ಶಂಕರರು ಮೈ ತೊಳೆದುಕೊಳ್ಳುವಾಗ ತುಸು ಗೊಂದಲವಾಯಿತು. ಪಾರ್ವತಿಯ ಸರತಿ ಬರುವುದನ್ನು ಕಾಯ್ದು ನಿಂತಿದ್ದೆವು.

ಹೆಹ್ಹೋ ! ತಾಯಿ ಕರೆದುಕೊಂಡು ಬಂದರು. ಪಾರ್ವತಿ ಕಣ್ಣೀರು ಹಾಕುತ್ತ ಬಂದಳು.

ತಲೆಗೆ ಎಣ್ಣೆ ಹಾಕಿದರು ತಾಯಿ. ಬಾಚಣಿಕೆ ಎತ್ತಿದರು. ಆಗ ಪಾರ್ವತಿ ನೀರಿನಿಂದ ಹೊರಬಿದ್ದ ಮೀನಿನಂತೆ ಚಡಪಡಿಸಿದಳು. ಏಟು ಬಿದ್ದುವು. ಕಾರ್ಯ ನಿಲ್ಲಲಿಲ್ಲ. ನೀರ ಮನೆ ದಾಟಿ ಪಾರ್ವತಿಯೂ ಕೊನೆ ಗೊಮ್ಮೆ ಪಾರಾಗಿ ಬಂದಳು.

ಒಲೆಯ ಮೇಲಿಟ್ಟ ನೀರಿನ ಪಾತ್ರೆಯ ಕೊರಲಿಗೆ ಮಾನಂಗಿ ಬಳ್ಳಿ ಸುತ್ತಿತ್ತು.

ನಾವೆಲ್ಲ ಅದನ್ನು ಸಿಟ್ಟಿನಿಂದ ನೋಡಿದೆವು. ಅದು ಏನೋ ಉತ್ತರ ಹೇಳಿತು. ಉತ್ತರವಲ್ಲ ! ಭವಿಷ್ಯ !

* * * *

ಅಯ್ಯೋ ! ಇಂದು ಯುಗಾದಿಯಂತೆ, ಯುಗಾದಿ !

ಲಿಂಗು, ನಾನು ಇಬ್ಬರೇ !

ಒಲೆಯ ಮೇಲಿನ ಪಾತ್ರೆಗೆ ಮಾಸಂಗಿ ಬಳ್ಳಿ ಇಲ್ಲ. ಆದರ ಭವಿಷ್ಯ ನಿಜವಾಯಿತೇ ?

ಪಾರ್ವತಿಗೆ ಎಣ್ಣೆ ಹಚ್ಚುವ ಕೈ ಕಣ್ಣೀರು ಒರೆಸುತ್ತಿದೆ. ಶಿವನ ಮೈಗೆ ನೀರೆರೆಯುವ ಕೈ ಬತ್ತಿದೆ. ಸಿದ್ದ ಶಂಕರರನ್ನು ಎತ್ತಿ ಆಡಿಸುವ ಕೈ ಮೊಗಕ್ಕೆ ಆನಿಕೆಯಾಗಿದೆ. ಶೇಖರನ ತೊಟ್ಟಿಲ ತೂಗುವ ಕೈ ಹಣೆ ಬಡೆದುಕೊಳ್ಳುತ್ತಿದೆ !

ಬೆಳ್ಳಿ ಮೂಡಿದೆ. ಬೆಳ್ಳಿ ನಗುತ್ತಿದೆ. ಕೋಳಿ ಕೂಗುತ್ತಿವೆ. ಕೋಳಿ ಎಚ್ಚರಿಸುತ್ತಿವೆ. ರೈತರು ಎದ್ದಿದ್ದಾರೆ. ಊರ ಮನೆಯ ಮಕ್ಕಳ ಎರಕೊಳ್ಳು ತ್ತಿದ್ದಾರೆ. ಎಲ್ಲರ ಮನೆಯ ಬೆಳಕಿಂಡಿಯಿಂದ ನಗುವಿನ ಕಿರಣಗಳು ತೂರಿ ಬರುತ್ತಿವೆ. ' ರತ್ನ ' ಪಕ್ಷಿಯ ದರುಶನಕ್ಕೆ ಎಳೆಯರ ಮೊಗಗಳು ನಾ ಮುಂದೆ ನೀ ಮುಂದೆ ಎನ್ನುತ್ತಿವೆ !

ಓ, ನನ್ನ ಒಡಹುಟ್ಟಿದವರೇ, ನೀವೆಲ್ಲಿ ? ಯುಗಾದಿ ಬಂದಾಗ ನೀವೆತ್ತ ಹೋಗಿದೀರಿ ? ಭವಿಷ್ಯಕ್ಕೆ ' ಓ ' ಗೊಟ್ಟಿರಾ ?

---

# ಪಾಂಡವರ ಜಾತ್ರೆ !

“ ಸಿದ್ದೂ, ನೀನು ಪಾರ್ವತಿಯ ಜತೆಗಿರು. ಏ ಶಂಕರ, ಎಲ್ಲಿ ನೋಡುತ್ತೀ ? ನೀನು ಶಿವನ ಕೈ ಹಿಡಿದುಕೊಂಡು ಬಾ. ಲಿಂಗೂ ನೀನು ಇವರನ್ನು ನೋಡುತ್ತಿರು. ಅವ್ವ, ತಾ ಇಲ್ಲಿ ನನ್ನ ಕೈಗೆ ಶೇಖರನನ್ನು; ನಾನು ಎತ್ತಿಕೊಂಡಿರುತ್ತೇನೆ. ಜೋಕೆ ಸಿದ್ದು, ನೀನು ಅತ್ತಿತ್ತ ಹೋಗಬೇಡ. ಹೌದಽ ! ಶಂಕರ, ನಿನಗೆ ಮನೆಯಲ್ಲಿರು ಎಂದೆ. ಏನು ನಿನ್ನ ಕೆಲಸ ಇತ್ತಿಲ್ಲಿ ? ಏನು ತಿಳಿಯುತ್ತದೆ ನಿನಗೆ ? ಎಲ್ಲಿಯಾದರೂ ತಪ್ಪಿಸಿಕೊಂಡರೆ ತೀರಿತು. ನಿನ್ನನ್ನು ಎಲ್ಲಿ ಹುಡುಕುತ್ತ ತಿರುಗಾಡೋಣ ? ಬಾ ಇಲ್ಲಿ. ಶಿವೂ, ನೀನೂ ಹತ್ತಿರವೇ ಬಾ. ಶಂಕರನನ್ನು ಗಟ್ಟಿಯಾಗಿ ಹಿಡಿದುಕೊಂಡಿರು. ಅವನಿಗೆ ಏನೂ ಗೊತ್ತಿಲ್ಲ. ತಲೆಯ ಮೇಲಿನ ಟೊಪ್ಪಿಗೆ ಕಸಿದುಕೊಂಡು ಹೋದರೂ ತಿಳಿಯುವುದಿಲ್ಲ ಆತನಿಗೆ. ಎಲ್ಲಿಯೂ ಬಿಡಬೇಡ ಅವನನ್ನು. ಏಕೆ ? ಶೇಖರ, ಏಕೆ ಅಳುತ್ತೀಯೊ ? ಇವನನ್ನು ಮನೆಯಲ್ಲಿ ಬಿಟ್ಟು ಬಂದರೆ ನಡೆಯುತ್ತಿರಲಿಲ್ಲೇನು, ಅವ್ವ ? ನಾನು ಬೇಡ ಅಂದೆ. ಆದರೂ ತಂದಿದಾಳೆ ಅವನನ್ನು. ಹ್ಲೂ, ಬರ್ರಿ. ದೇವಾಲಯಕ್ಕೆ ಹೋಗೋಣ. ಇಲ್ಲಿ ನೋಡು. ಏ ಸಿದ್ದ, ಪಾರ್ವತಿ, ಶಂಕರ, ಪಾಂಡವರ ಗುಡಿ ಇವು. ಮೊದಲು ತೆಂಗು ಕೊಂಡು ದೇವರಿಗೆ ಕೈಮುಗಿದು ಬರೋಣ. ಆಮೇಲೆ ಭೀಮನ ಗುಡಿಗೆ ಹೋಗೋಣ. ಅಲ್ಲಿ ಬೇಡ ಬರ್ರಿ. ದಾರಿ ಸರಿಯಾಗಿಲ್ಲ. ಮುಂದೆ ಬಾವಿ ಇದೆ. ಈ ಹುಡುಗರನ್ನು ಕಟ್ಟಿಕೊಂಡು ಬಂದೇವಿ. ಆ ಹಾದಿಯ ಸುಳಿವು ಬೇಡವೇ ಬೇಡ. ಹ್ಲಾ, ಹೀಗೆ ಬರ್ರಿ. ಶಿವೂ, ನೀನು ಶಂಕರನನ್ನು ಬಿಡು. ಹೋಗು ಅಲ್ಲಿ. ಒಂದು ತೆಂಗು, ಕರ್ಪೂರ ಕೊಂಡು ತಾ. ಶಂಕರ, ಬಾ, ನನ್ನ ಅಂಗಿಯ ಚುಂಗು ಹಿಡಿದುಕೊಂಡು ಬಾ. ಬೇಗ ತಾ ಶಿವು. ಅವ್ವಾ, ತಾ ನನ್ನ ಕೈಯಲ್ಲಿ ತಮ್ಮನನ್ನು. ನಿನ್ನ ಜತೆಗೆ ಇದ್ದರೆ ಆತ ಹಾಗೆಯೇ ಅಳೋದು. ಬಿಡು ಇಲ್ಲಿ. ನನಗೆ ಹೆದರುತ್ತಾನೆ. ಏನು ? ಬೇಡಽ ! ಮತ್ತೇನು ? ಆತ ಅಳೋದನ್ನು ಕಡಮೆ ಮಾಡಲೊಲ್ಲ. ಮೌನದಿಂದಿರಲೂ ಒಲ್ಲ. ಗದ್ದಲದಲ್ಲಿ ಅಳೋದು ಸರಿಯಲ್ಲ. ಸುಮ್ಮನಾದನೇ ? ಹಾ !

ಈಗ ಸರಿ ಹೋಯಿತು. ಶಿವು ತಂದನೇ ? ತಂದನಲ್ಲವೇ ? ಇನ್ನು ಸೀದಾ ಗುಡಿಗೆ ಹೋಗೋಣ. ಏನು ಬಿಸಿಲು ಅದ. ನೋಡವ್ವ ! ಹುಡಿಯೆಲ್ಲ ಹಾರಿ ಮುಗಿಲಿಗೆ ಹೊರಟದ. ಅಲ್ಲಿ ನೋಡು ಸುಂಟರಗಾಳಿ. ಏನ್ರಿ ? ದೆವ್ವನ ಗಾಳಿ ? ಅಲ್ಲೊ ಸಿದ್ದ, ಅದು ಸುಂಟರಗಾಳಿ. ನೆಲ ಕಾದು ಹುಡಿ ಮೇಲೇರು ತ್ತದೆ. ಇರಲಿ ಬರ್ರಿ. ಅದನ್ನು ತಕ್ಕೊಂಡು ಏನು ಮಾಡೋದು. ಅವ್ವ, ಎದುರಿಗಿನ ಗುಡಿ ಪಾಂಡವರದು. ಇದರ ಎದುರಿನಲ್ಲಿರೋದು ಕೃಷ್ಣನ ಗುಡಿ. ಪಾಂಡವರ ಗುಡಿಯಲ್ಲಿ ಈಶ್ವರನ ಮೂರ್ತಿ ಇದೆ. ಪಾಂಡವರಿಗೆ ಕೈ ಮುಗಿದು ಈಶ್ವರನಿಗೆ ತೆಂಗು ಹಿಡಿಯೋಣ. ಹತ್ತಿರಿ ಪಾವಟಿಗೀನ. ಶಂಕರ ಅದಿ ಇಲ್ಲಪಾ ! ಸಿದ್ದೂ ಪಾರ್ವತೀ ಅದೀರಾ? ಲಿಂಗೂ, ಬಾ, ಏರು ಪಾವಟಿ ಗೀನ. ಇಲ್ಲಿ ನೋಡಿರಿ ಇದು ಧರ್ಮರಾಜನ ಮೂರ್ತಿ. ಅವ್ವ, ಇವನ ಬಗ್ಗೆ ಒಂದು ಕಥೀನ ಅದ. ಬೇಡಿದವರ ಬಯಕೆಯನ್ನು ಸಲ್ಲಿಸುತ್ತಾನೆ ಈ ಮಹಾ ಧರ್ಮಮೂರ್ತಿ. ಮನಸ್ಸಿನಲ್ಲಿ ಹರಕೆಯನ್ನು ಹಿಡಿದುಕೊಂಡು ಆತನ ಮೇಲೆ ಏರಿಸಿದ ಯಾವೊಂದು ಹೂವನ್ನು ನೋಡುತ್ತ ಧ್ಯಾನಿಸುತ್ತ ನಿಂತರೆ ತೀರಿತು. ಕ್ಷಣಹೊತ್ತಿನಲ್ಲಿ ಆ ಹೂ ಉದುರಿ ಬೀಳುತ್ತದೆ. ಅದುವೇ ಪ್ರಸಾದ. ಅದನ್ನು ಪಡೆದರೆ ತೀರಿತು. ಕಾರ್ಯ ಕೈಗೂಡುತ್ತದೆ. ನೀನು ಈಗಲೆ ಹರಕೆ ಹೊತ್ತು ಬಿಟ್ಟಿಯೇನು ಅವ್ವ ? ಬೇಡ, ಗದ್ದಲ ಇದೆ. ಇಷ್ಟು ಜನ ಬಂದು ಹೋಗುತ್ತಾರೆ. ಎಲ್ಲರೂ ಹೀಗೆ ಹರಕೆ ಹೊತ್ತರೆ ಆತನಿಗೆ ಆಶೀರ್ವದಿಸಲು ಸಮಯ ಕೂಡ ಬೇಡವೇ ? ಇನ್ನೊಮ್ಮೆ ಜಾತ್ರೆ ಇಲ್ಲದಾಗ ಬರೋಣಂತೆ. ಈ ಕಡೆ ನೋಡು ತಾಯಿ ! ಕೊಂತಿದೇವಿ, ನಕುಲ, ಸಹದೇವ, ಅರ್ಜುನ. ಸಿದ್ದು, ಶಂಕರ, ನಿಮ್ಮ ಹಾಗೆ ಇಬ್ಬರು ಅಣ್ಣ ತಮ್ಮಂದಿರಿಲ್ಲಿ ನಿಂತಿದಾರೆ ನೋಡಿರೊ. ಕೊಂತಿ ಏನು ಮಹಾದೇವಿ ಈಕೆ ! ಆದರೂ ಅವ್ವ, ಹಡೆದ ಕರ್ಣನನ್ನು ಒಡಹುಟ್ಟಿದವರಿಗೆ ಗೊತ್ತಿಲ್ಲದಂತೆಯೇ ದೂರಿಟ್ಟಳು ನೋಡು. ಕುಂತಿ ಕರ್ಣನ ಸಾವನ್ನು ನೆನೆದು ಈಗಲೂ ಅಳುತ್ತಾಳೋ ಎನ್ನುವಂತೆ ತೋರುವುದಿಲ್ಲವೇ ? ಎಷ್ಟಾದರೂ ಹೆತ್ತ ಹೊಟ್ಟೆಯಲ್ಲವೆ ? ಏನು ಅವ್ವ, ಇಷ್ಟಕ್ಕೆ ಕಣ್ಣೀರುಹಾಕುತ್ತೀಯಲ್ಲ ! ಎಲ್ಲಾ ಕಥಿ ಗೊತ್ತಾಯಿತೇನು ? ಹೊ! ಮೊನ್ನೆ ನಡೆದ ಕೀರ್ತನ ಕೇಳಿ ಎಲ್ಲಾ

ನೆನಪು ಆದಂತೆ ತೋರುತ್ತದೆ. ಅದೇ ಕೊಂತಿ ನೋಡು ಈಕೆ. ಮುಖದ ಮೇಲಿನ ಗೆರೆಗಳನ್ನು ನೋಡು. ತಾಯಿ ಮಕ್ಕಳ ಆಗುಹೋಗುಗಳನ್ನು ನೆನೆದುಕೊಂಡಿದ್ದಾಳೆ. ರಾಜ್ಯವನ್ನು ಕೌರವರಿಗೆ ಕೊಟ್ಟು ಅಡವಿಯಲ್ಲಿ ಒಂದು ಉಪವಾಸ, ಒಂದು ಅರೆ ಉಪವಾಸ ಮಾಡುತ್ತ, ಅಜ್ಞಾತವಾಸ ದಲ್ಲಿರುವುದನ್ನು ನೆನೆ ನೆನೆದು ಬಳಲಿ ಬೆಂಡಾಗಿ ಹೋಗಿದ್ದಾಳೆ. ಕೌರವ ರಾಜನಿಗೆ ಕೊಂತಿಯ ಮೇಲೂ ಕರುಣೆ ಬರಲಿಲ್ಲ ಎನ್ನುತ್ತೀಯಲ್ಲವೇ ಅವ್ವ? ಆತನಿಗೆ ಕರುಣೆ ಎನ್ನುವುದು ಇದ್ದಿದ್ದರೆ ದ್ರೌಪದಿಯ ಸೀರೆಯನ್ನು ಸಭೆಯಲ್ಲಿ ಸೆಳೆಯುತ್ತಿದ್ದನೇ? ಇಗೋ, ಇಲ್ಲಿದಾಳೆ ಆ ಮಹಾ ಸಾಧ್ವಿ. ಈಕೆ ದ್ರೌಪದಿ. ಪಾರ್ವತಿ, ನೋಡು ಈಕೆ ನಿನ್ನ ಅಕ್ಕ. ದ್ರೌಪದಿಯ ಮುಖದ ಮೇಲೆ ಈಗಲೂ ಉಕ್ಕುವ ದಿವ್ಯ ತೇಜಸ್ಸನ್ನು ನೋಡು, ತಾಯಿ. ತನ್ನ ಕೈಹಿಡಿದವರ ಎದುರಿನಲ್ಲಿ ಕೌರವರಾಜ ಸೀರೆ ಸೆಳೆದು ಮಾನಭಂಗ ಮಾಡಿದುದನ್ನು ಕ್ಷಣಕ್ಷಣಕ್ಕೂ ನೆನೆದು ಕ್ಷಣಕ್ಷಣಕ್ಕೂ ಕೆರಳಿದ ಸಿಂಹಿಣಿಯಂತೆ ರೂಪದೋರುವ ಈ ವೀರಮಾತೆಯನ್ನು! ದ್ರೌಪದಿಯು ಕಷ್ಟಪಟ್ಟುದು ಎಷ್ಟದು! ಅವಳ ಕಿಡಿಗಣ್ಣು ಲೋಕವನ್ನೇ ಸುಡಬಹುದಾ ಗಿತ್ತು. ಆದರೆ ಧರ್ಮ ಯುದ್ಧಕ್ಕಾಗಿ ಕಾದು ನಿಂತಿದ್ದಳು. ಪಾರ್ವತೀ, ನಮಸ್ಕಾರ ಮಾಡು. ಇವರು ನಕುಲ ಸಹದೇವರು. ಗೋವಳರೆಂದು ಇವರು ಲೋಕದ ಬಾಯಲ್ಲಿ ನಲಿಯುತ್ತಿದ್ದಾರೆ. ತಾಯ ಹಾಲು ಜತೆ ಯಲ್ಲಿಯೇ ಕುಡಿದು ಜತೆಯಾಗಿಯೇ ಬಾಳಿದ ಆದರ್ಶ ಸಹೋದರರು! ಅಣ್ಣಂ- ದಿರ ಹಿಂದೆ ನಿಂತು ಮುಂದಿನ ಮಾರ್ಗವನ್ನು ತೋರಿಸಿಕೊಡುವ ದಿವ್ಯ ಜ್ಞಾನಿಗಳು. ಬನ್ನಿರಿ. ಈಶ್ವರಲಿಂಗಕ್ಕೆ ಕೈ ಮುಗಿದು ಕಾಯಿ ನೀವೇದಿ ಸೋಣ. ಶಿವೂ, ಪೂಜಾರಿಗೆ ಕೊಡು ಕಪ್ಪುರ ಕಾಯಿ. ತಂಗೀ, ಈ ಅಂಗಾರ ಹಚ್ಚು ಸಿದ್ದ ಶಂಕರರಿಗೆ. ಪ್ರಸಾದ ಸ್ವೀಕರಿಸೋ ಲಿಂಗು. ಏನು? ಇನ್ನೊಮ್ಮೆ ಧರ್ಮರಾಜನಿಗೆ ನಮಸ್ಕಾರ ಮಾಡುತ್ತಿಯಾ ಅವ್ವ? ನನಗೂ ಹಾಗೆಯೇ ಆಗಿತ್ತು. ಆದರೆ ಹೊತ್ತು ಮುಳುಗಲಿಕ್ಕೆ ಬಂದಿದೆ. ಜನ ಜಾತ್ರೆಯಾಗಿದೆ. ಬೇಗ ಬೇಗ ದೇವಾಲಯ ನೋಡಿಕೊಂಡು ಮನೆಗೆ ಹೋಗೋಣ ಇನ್ನು. ಆಗಲಿ, ಇನ್ನೊಮ್ಮೆ ನಮಸ್ಕಾರ ಮಾಡೋಣ ಬರ್ರಿ. ಆ ಕ್ಷಮಾಶೀಲ ಮೂರುತಿಯ ಪಾದಗಳನ್ನು ಎಷ್ಟು ಮುಟ್ಟಿದರೂ ಮನಸ್ಸಿಗೆ

ಶಾಂತಿ ಸಾಲದೆ ಹೋಗುವುದು. ಆಯಿತೇ? ಬರ್ರಿ. ಇಲ್ಲಿ ಹೊರಗಿರುವ ಈ ಮೂರುತಿ ಯಾರದು ಗೊತ್ತಿದೆಯೇ ಅವ್ವ? ಇವನೇ ಕರ್ಣ ನೋಡು, ಸೂತಪುತ್ರನಾಗಿ ಮೆರೆದ ದಾನಿ, ವೀರ, ಸತ್ಯಸಂಧ, ಈತ ಕರ್ಣ. ತಾಯಿ, ಮಗನನ್ನು ಸಹೋದರರಿಗೆ ಪರಿಚಯ ಮಾಡಿಕೊಡಲಿಲ್ಲ. ಲೋಕಾಪವಾದ ಯಾರನ್ನೂ ಅಲುಗಾಡಿಸದೆ ಬಿಡಲಿಲ್ಲ, ನೋಡು ಅವ್ವ! ಅದೇ ನೋಡು. ಕೃಷ್ಣನ ದೇವಾಲಯ. ಏನು? ಆಂ, ಕುಹಕನೇ ಕೃಷ್ಣ? ಯಾರು ಹೇಳಿದರು ನಿನಗೆ? ಆ ಕೀರ್ತನಕಾರರೇ? ಛೇ! ಧರ್ಮಯುದ್ಧಕ್ಕೆ ಹೆದರಿ ನಿಂತ ಅರ್ಜುನ ಕೊನೆಯ ವರೆಗೂ ಹೆದರಿ ನಿಂತಿದ್ದರೆ ಲೋಕದ ಪರಿಸ್ಥಿತಿ ಏನಾಗುತ್ತಿತ್ತು? ಕೃಷ್ಣ ಅಮೃತ ಮಂತ್ರವನ್ನು ಅರ್ಜುನನಿಗೆ ಎರೆಯದಿದ್ದರೆ ಎಂತಹ ಪ್ರಲಯ ಉಂಟಾಗುತಿತ್ತು? ಕೈತವದ ಶಿಕ್ಷಾಗುರು ಕೃಷ್ಣ ಮಾಯೆಯಾಟವನ್ನು ಹೂಡದಿದ್ದರೆ ಪಾಪದಂಡ ಲೋಕವನ್ನೆ ಆಳುತಿತ್ತು. ಇನ್ನೇನೂ ಅಲ್ಲ ಕೃಷ್ಣ. ಆತ ದೇವರೇ ಸರಿ. ಗೋಕುಲದಲ್ಲಿ ಮಾನವನಾಗಿ ಹುಟ್ಟಿಬಂದು ಪಾತಾಳಕ್ಕಿಳಿದ ಧರ್ಮವನ್ನು ಮತ್ತೆ ಎತ್ತಿಹಿಡಿದ. ನಮಸ್ಕಾರ ಮಾಡಿದಿರಾ? ಬನ್ನಿ ಮಾಕಾಳಿಯನ್ನು ತೋರಿಸುತ್ತೇನೆ. ಈ ಬನ್ನಿಯ ಮರ ನೋಡು ತಾಯಿ, ನಮ್ಮ ಪುರಾಣ ವೃಕ್ಷ. ನಮ್ಮ ಧರ್ಮದ ಮಂದಿರಕ್ಕೆ ಆಧಾರ ಸ್ತಂಭವಾಗಿ ಇಂದಿಗೂ ನಿಂತಿದೆ ಈ ಮಹಾ ಮರ. ಪಾರ್ವತೀ, ಈ ಪಾತ್ರೆಯನ್ನು ನಿನ್ನ ಹತ್ತಿರ ಕಾದಿಟ್ಟುಕೊ. ಅವ್ವ, ಪಾಂಡವರು ವಿರಾಟನಗರಕ್ಕೆ ಅಂದರೆ ಈಗಿನ ಹಾನಗಲ್ಲಿಗೆ ಹೋಗುವಾಗ ವೇಷ ಬದಲಿಸಿದರು. ತಮ್ಮ ಬಿಲ್ಲು ಬಾಣಗಳನ್ನು ಈ ಬನ್ನಿಯಮರದ ಆಶ್ರಯದಲ್ಲಿ ಇಟ್ಟು ಹೋದರು. ಮರವಾದರೇನು? ಜೀವವಿಲ್ಲವೇ? ಅದೊಂದು ಮಾಕಾಳಿ. ಪಾಂಡವರು ಮಾಕಾಳಿಯಲ್ಲಿ ತಮ್ಮ ಆಯುಧಗಳನ್ನು, ಉಡುಪನ್ನು ಹುದುಗಿಸಿ ವೇಷ ಧಾರಣೆ ಮಾಡಿದರು. ಹ್ಹಾ! ಬರೋಬರಿ ಶಿವನ ಪ್ರಶ್ನೆ. ಅವ್ವ, ಭೀಮನಿಗೂ, ಅರ್ಜುನ ಧರ್ಮರಾಜರಿಗೂ ಇಲ್ಲಿ ಒಂದಿಷ್ಟು ಕಾದಾಟವಾಯಿತು. ಹಿರಿಯ ಅಣ್ಣ ಭೀಮನಿಗೆ ತನ್ನ ಗದೆಯನ್ನು ಮಾಕಾಳಿಗೆ ಒಪ್ಪಿಸಲು ಕೇಳಿದ. ಇದು ಆ ವೀರಮೂರ್ತಿಗೆ ಅಸಹ್ಯವಾಯಿತು. ಅಣ್ಣನ ಮಾತು ಕೇಳುವುದು ಆತನಿಗೆ ಸರಿಬರಲಿಲ್ಲ. ಅಂಥ ಹೇಡಿಯೇ ತಾನು ಎಂದು

ಸಹೋದರರಿಗೆ ಸವಾಲು ಹಾಕಿದ. ಬಹಳ ಹೊತ್ತಿನವರೆಗೆ ಶಿಕ್ಕಾಟವಾಯಿತು. ಭೀಮನಿಗೆ ಉಭಯ ಸಂಕಟ. ಅಣ್ಣಂದಿರ ಮಾತು ಕೇಳಿದರೆ ಒಂದು ಅಪಮಾನ. ಕೇಳದಿದ್ದರೆ ಇನ್ನೊಂದು ಅಪಮಾನ. ಭೀಮ ಭೀಮಕೋಪಿ. ಇವರ ಸಹಾಸವೇ ಬೇಡೆಂದು ತನ್ನ ಗದೆಯನ್ನು ಅವರಿಗೊಪ್ಪಿಸಿ ಹೊರಟು ಹೋದ. ಅದಕ್ಕೇ ಇಲ್ಲಿ ಭೀಮನ ಮೂರ್ತಿ ಇಲ್ಲ. ಅಲ್ಲಿ ಇದೆ ಹೆಳ್ಳದ ದಂಡೆಯ ಮೇಲೆ. ಆಯಿತೇ ಇಲ್ಲಿಯ ಕೆಲಸ? ಏನು ಲಿಂಗು, ನೀನು ಕುಸ್ತಿ ನೋಡಲು ಹೋಗುತ್ತೀಯಾ? ಹಾಗಾದರೆ ಇಲ್ಲಿಯೇ ಇರು. ನಾವು ಹೋಗಿಬರುತ್ತೇವೆ. ದೂರ ಇಲ್ಲ ಬಾ ಅವ್ವ. ಏಕೋ ಶೇಖರ ಈಗ ಶಾಂತನಾಗಿದ್ದಾನಲ್ಲ! ಅವನಿಗೂ [illegible] ಇಷ್ಟ. ಹೌದೆ ನೋ ಶೇಖರ! ಒಂದಿಷ್ಟು ಬೆಲ್ಲ ಕೊಡ್ತೀಯಾ? ಹಾ, ಸಾಕು ಬೆಲ್ಲ; ನಡೀರಿ. ಹಾಯಾಗಿ ಬಾರಪ್ಪ ಶಂಕರ. ಪಾರ್ವತೀ, ನಿನ್ನ ಜತೇಲಿ ಬರ್ರಿ. ಮುಳ್ಳು ನಟ್ಟಾವು. ಜೋಕೆ ಇಲ್ಲಿ ಇಳೀರಿ. [illegible] ಇವೆ. ಬಿದ್ದೀರಿ, ಬಿದ್ದೀರಿ, ಹುಷಾರಿ! ಹೀಗೆ ಕಂಟಿ ಇವೆ. ಇಲ್ಲಿ ನೋಡು ಪಾರ್ವತಿ, ಮುಳ್ಳಿನ ಕೊಂಪಿಯೇ ಇದೆ. ಅದನ್ನು ನೋಡಿ ದಾಟಿರಿ. ಹೊ! ಇವೇನು ನನಗೇ ನಟ್ಟಿತಲ್ಲ ಮುಳ್ಳು. ತಡಿರಿ, ಅವಸರ ಮಾಡಬೇಡಿರಿ. ಸರಿ ಆಯಿತು. ಇದೇ ಗುಮ್ಮಟವೇ ಭೀಮನ ಮನೆ. ನೋಡು ಅವ್ವ. ಹೌದು, ಅಲ್ಲಿ ಅಣ್ಣಂದಿರೊಡನೆ ಕಾದಾಡಿ ಇಲ್ಲಿ ಬಂದು ನಿಂತ ಭೀಮ. ಆತನಿಗೆ ಸಮಾಧಾನ ಹೇಳಿ ಕರೆದುಕೊಂಡು ಹೋಗಬೇಕಾದರೆ ಧರ್ಮರಾಜ ಸಣ್ಣಾಗಿ ಹೋದ. ಈ ಎತ್ತರವಾದ ಶಿಲೆ ಭೀಮನ ಗದೆ. ಹಾಗೆಯೇ ಕಟೆದಿದ್ದಾರೆ ಶಿಲ್ಪಿಗರು. ಭೀಮನ ಮನೆ ಇಲ್ಲಿಯೇ ಮಾಡಿಸಿದ್ದಾರೆ. ಆತನ ಪೂಜೆ ಇಲ್ಲಿಯೇ ನಡೆದಿದೆ. ನೋಡೋದು ಮುಗಿಯಿತು. ತಿರುಗಿರಿನ್ನು ಶಂಕರ, ನನ್ನ ಬೆನ್ನು ಏರು ಬಾ, ಸಾಕಾಗಿದ್ದೀತು. ಏನ್ರೀ? ಶಂಕರ ನಂತೆ ನೀನೂ ಸಣ್ಣವನೇನೋ ಶಿವ್ಯಾ? ನಡೆದುಕೊಂಡು ಬಾ. ತಿನ್ನಲು ಕೊಡಿಸುತ್ತೇನೆ. ಶಿವೂ, ಹೋಗು, ಚುರಮುರಿ, ಅವಲಕ್ಕಿ ಏನನ್ನಾದರೂ ತಕ್ಕೊಂಡು ಬಾ. ನಾವಿಲ್ಲಿ ನಿಲ್ಲುತ್ತೇವೆ. ಎಷ್ಟುಬೇಗ ಬಂದೆಯಲ್ಲೋ!

ಮೊದಲು ಶಂಕರನಿಗೆ ಕೊಡು. ಸಿದ್ದು, ನಿನ್ನ ಕಿಸೆ ತುಂಬಿಕೊ. ಪಾರ್ವತಿಯ ಲಂಗಕ್ಕೆ ಕಿಸೆ ಇಲ್ಲ. ಈ ವಸ್ತ್ರದಲ್ಲಿ ನಿನ್ನ ಪಾಲು ಹಾಕಿಸಿಕೊ. ಶೇಖರನಿಗೆ ಏನು ತಂದೆ? ಹೆಣ್ಣಿಲ್ಲವೇನು? ಚೆನ್ನಾಗಿಲ್ಲವೇ? ಇರಲಿ ಸ್ವಲ್ಪ ತಾ ಹೋಗು. ಕೊಡು ಅದನ್ನು. ಬಂಡಿಯನ್ನೇರೋಣ. ಬರ್ರಿ. ಲಿಂಗು ಇನ್ನೂ ಬರಲಿಲ್ಲೇನು? ಎಲ್ಲಿ ಹೋದ? ಈ ಹುಡುಗನಿಗೆ ಕುಸ್ತಿ ಅಂದರೆ ತೀರಿತು. ಹಾಲು ಸಕ್ಕರಿ ಕುಡಿದ ಹಾಗೆ. ಕೂಗಿರಿ ಅವನನ್ನು. ಇಲ್ಲ ನಾನೇ ಕೂಗುತ್ತೇನೆ ಸರೀರಿ. ಲಿಂಗೂ, ಏ ಲಿಂಗೂಽ......."

ಕೂಗು ನನ್ನ ಕನಸನ್ನು ಕಡಿದೊಗೆಯಿತು. ಎದುರಿನಲ್ಲಿ ತಾಯಿ ಕುಳಿತಿದ್ದರು. 'ಲಿಂಗೂ ಒಳಗೆ ಇದ್ದಾನೆ ತಮ್ಮಾ' ಎಂದರು. 'ಈ ದಿನ ಜಾತ್ರೆ ಅಲ್ಲವೇ ಅವ್ವ?' ಎಂದೆ. ತಾಯಿಗೆ ಕಣ್ಣಲ್ಲಿ ಕಂಠದುಂಬಿ ಬಂದಿತ್ತು. ಕ್ಷಣಹೊತ್ತಿನ ಮೇಲೆ ನುಡಿದರು. 'ಹೌದು, ಪಾಂಡವರ ಜಾತ್ರೆ. ಐದು ಮಂದಿ ಹೋಗಿದ್ದಾರೆ!'

ನಾನು ಎದ್ದು ಮುಖ ತೊಳೆದುಕೊಳ್ಳಲು ಒಳಗೆ ಹೋದೆ. ಒಳಗೂ ಹೊರಗೂ ಗಾಳಿ ಸುಳಿದಾಡಿತು. 'ಪಾಂಡವರ ಜಾತ್ರೆ'ಯ ಗುಟ್ಟನ್ನು ಹಾಡಿತು; 'ಹೋದವರು ತಿರುಗಿ ಬಾರರು!' ಎಂದಿತು.

# ಯಾವ ಮಂತ್ರ ಇದು ?

ವೈಶಾಖ ಮಾಸದ ನಡುಹಗಲಲ್ಲಿ ಹಳ್ಳಿಗಳಿಗೆ ಹೋಗಿ ಸಂಚಾರ ಮಾಡಿ ಬಂದಿದ್ದೀರಾ ನೀವು ? ಕಾಲಿಗೆ ತೊಪ್ಪಲು ಕಟ್ಟಿಕೊಂಡು ಕಾಯ್ದ ಎರೆಮಣ್ಣಿನಲ್ಲಿ ಕಾಲಿಟ್ಟುಕೊಂಡು ಬಾಗಿ ಬಾಗಿ ಹತ್ತಿಯನ್ನು ಬಿಡಿಸುತ್ತಿರುವ ಹಳ್ಳಿಯ ದೀನ ಹೆಂಗಳೆಯರನ್ನು ನೀವು ನೋಡಿದ್ದೀರಾ ? ದೀನರಲ್ಲ ಅವರು. ನನ್ನ ಕಣ್ಣು ಮುಂದಿನ ದೇವತೆಗಳು. ದೇವತೆಗಳೆಂಬೆನೆ ? ಕಷ್ಟದ ಸವಿಯನ್ನು ಕನಸಿನಲ್ಲೂ ಕಾಣದ ದೇವತೆಗಳ ಸಿರಿ ಸಂಪತ್ತು ಇವರ ಮುಂದೇನು ?

ನಮ್ಮೂರ ಅಗಸೆಯ ಬಾಗಿಲನ್ನು ಸೇರುವ ಮುನ್ನ ಅಲ್ಲಿರುವ ಓವರಿಯೊಂದರ ಮೇಲೆ ನಿಂತುಕೊಂಡು ಸುತ್ತುಕಡೆಗೂ ನೋಟ ಬೀಸಿರಿ. ಸುತ್ತು ಕಡೆಗೂ ಹೊರಳಿ ನೋಡಿರಿ. ಕಾಣುತ್ತಿವೆ ನಿಮಗೆ ಬೆಳ್ಳಿಯ ಹೊಲಗಳು. ಬೆಳ್ಳಿಯನ್ನು ಬಿಡಿಸುವ ತಾಯಂದಿರು ತೋರುತ್ತಾರೆ ನಿಮಗೆ. ಸೋಬಾನ ಹೇಳುತ್ತ, ಅತ್ತಿತ್ತ ಚಲಿಸುವ ನಮ್ಮೂರ ತಾಯಂದಿರು ಕಾಣುತ್ತಾರೆ ನಿಮಗೆ ! ಅಲ್ಲಲ್ಲಿ ಕಾಣುವ ಚಿಗಿತ ಮಾಮರಗಳ ಟೊಂಗೆಗೆ ತೂಗು ಹಾಕಿದ ರೊಟ್ಟಿಯ ಗಂಟು, ಅವುಗಳಡಿಯಲ್ಲಿಟ್ಟ ತುಂಬಿದ ಬಿಂದಿಗೆ ನಿಮ್ಮನ್ನೆ ನೋಡುತ್ತಿರುತ್ತವೆ. ಕೆಲಹೊತ್ತು ನಿಂತು ನೋಡಿರಿ. ಅನುಭವಿಸಿ ತಿಳಿಯಿರಿ. ಆಗ ಅಗಸೆಯ ಬಾಗಿಲು ಸೇರದಂತೆ ನಿಮಗಾಗುತ್ತದೆ. ಊರ ದೇವತೆಗಳು ಅಡವಿಯನ್ನು ಸೇರಿದುವ ಕಂಡಾಗ ಊರಲ್ಲಿ ಕಾಲಿಡದಂತಾಗುತ್ತದೆ ನಿಮಗೆ. ಅಲ್ಲವೇ ?

ಹೀಗಿತ್ತು ಬೇಸಗೆಯ ಕಾಲ. ಕಟ್ಟೆಯ ಮೇಲೆ ಹಾಸಿಗೆಗೆ ಒರಗಿಕೊಂಡು ಓದುತ್ತ ಕುಳಿತುಕೊಂಡಿದ್ದೆ. ಹತ್ತಿರ ತಾಯಿ ಕುಳಿತಿದ್ದರು. ತಾಯಿ, ಮಗ ನಮ್ಮಿಬ್ಬರನ್ನು ಬಿಟ್ಟು ಊರಲ್ಲಿ ಸಂಚಾರವಿರಲಿಲ್ಲ. ನಾನು ಓದುತ್ತಿದ್ದಾಗ ನಡುವೆ ಎಲ್ಲಿಯಾದರೂ ನನಗೆ ಚೆಂದವೆಂದೆನ್ನಿಸಿದ ಬರೆಹವನ್ನು ತಾಯಿಗೆ ಓದಿತೋರಿಸುತ್ತಿದ್ದೆ. ಅವರಿಗೆ ಅದು ತಿಳಿದರೂ ಸರಿಯೆ. ತಿಳಿಯದಿದ್ದರೂ ಸರಿಯೆ. ಮಗನ ಮಾತಿಗೆ ಮರು 'ಓ' ಗುಡದೆ ಮಾತ್ರ

ಬಿಡುತ್ತಿರಲಿಲ್ಲ. ಕಾಲ ತಾಯಿ ಮಕ್ಕಳ ಜೀವನದ ಬೆಸುಗೆಯನ್ನು ಹೀಗೆ ನೋಡುತ್ತಿದ್ದ.

*　　*　　*　　*

ನಮ್ಮ ಮನೆಯ ಪಡುವಲೆಡೆ ಒಂದು ಹುಣಸೆಯ ಮರ ಸೀಳವಾಗಿ ಬೆಳೆದಿದೆ. ಮುದಿಯಾದುದರಿಂದ ಅಲ್ಲಲ್ಲಿ ಬರಡಾಗಿ ಕಾಣುತ್ತದೆ. ನೋಟಕ್ಕೆ ಚನ್ನಾಗಿ ತೋರದಿದ್ದರೂ ನೋಡುವವರಿಗೆಲ್ಲ ಮಾತ್ರ ಮರುಕ ಹುಟ್ಟಿಸುತ್ತದೆ.

ನಾನು ಓದುತ್ತಿದ್ದೆ. ತಾಯಿ ಕುಳಿತಿದ್ದರು. ಎಲ್ಲೆಲ್ಲೂ ಮೌನ ತಾಳ ಹಾಕುತ್ತಿತ್ತು.

ಆಗೊಂದು ಕೋಗಿಲೆ ಕೂಗಿತು. ಅದನ್ನು ಕೇಳಿ 'ಜಗ ಜುಮ್ಮೆಂದಿತು.'

ನಡುವೆಯೆ ಓದು ನಿಲ್ಲಿಸಿ ಕೂಗು ಕೇಳಿದೆ. ಮತ್ತೆ ಓದತೊಡಗಿದೆ. ಮನಸ್ಸು ಮೊದಲಿನಂತೆ ಹಿಡಿತದಲ್ಲಿರಲಿಲ್ಲ. ಒಮ್ಮೆ ಓದಿನ ಕಡೆ. ಇನ್ನೊಮ್ಮೆ ತಾಯ ಕಡೆ. ಮಗುದೊಮ್ಮೆ ಹುಣಸೆಯ ಮರದ ಕಡೆ. ಕೋಗಿಲೆ ಕೂಗುತ್ತಲೇ ಇತ್ತು.

ಕೋಗಿಲೆ 'ಕೂಹೂ' ಮಂತ್ರ ಜೋರಿನಿಂದ ಜಪಿಸತೊಡಗಿತು. ತಾಯಿ ಮಕ್ಕಳ ಹೃದಯ ಆಗ ಹೊಯ್ದಾಡಿತು.

*　　*　　*　　*

'ತಮ್ಮಾ!' ಎಂದರು ತಾಯಿ.

'ಅ್ಞ!' ಎಂದು ಓದು ನಿಲ್ಲಿಸಿ ತಾಯ ನೋಡಿದೆ. ಅವರ ಜೀವ ತಲ್ಲಣಗೊಂಡಂತೆ ತೋರಿತು. ಅವರು ಹೇಳತೊಡಗಿದರು.

'ತಾಯಿ ಹುಚ್ಚಿ. ಬಡವಿ. ಅರಗುಲಿ. ಅಲ್ಲದೆ ಏನು? ಮಗುವನ್ನು ಹೆತ್ತಳು. ಏಕೆ ಹೆರಬೇಕಾಗಿತ್ತು. ಬಂಜೆಯಾಗಿದ್ದರೆ ಏನಾಗುತಿತ್ತು? ಬಂಜೆಯಾಗಲು ಬೇಡ. ಆದರೆ ಹೀಗೆ ಮಾಡಬೇಕೆ?'

'ಏನು ಅವ್ವ? ಯಾವ ತಾಯಿ ಅನ್ಯಾಯ ಮಾಡಿದಳು?'

'ಏನಿಲ್ಲ. ಕೂಗುವ ಕೋಗಿಲೆ ನೋಡು, ತಮ್ಮ! ಚಿಕ್ಕ ಮರಿ. ಇನ್ನೂ ಕಂಠ ಸರಿಯಾಗಿಲ್ಲ. ತೊದಲು ನುಡಿಯುತ್ತದೆ. ದನಿಯೇ ಹೇಳುತ್ತಿದೆ ಮಗುವೆಂದು. ಕೇಳು.'

'ಆಯಿತು. ಅದಕ್ಕೇನು ಅನ್ಯಾಯ? ಏನು ಮಾಡಿದಳು ತಾಯಿ?'

'ಹೆತ್ತ ತಾಯಿ ಕೂಸಿನ ಉಪಚಾರ ಮಾಡದಿದ್ದರೆ ದಾದಿಯರು ಮಾಡಬೇಕೇ? ತಾಯ ಕಣ್ಣು ತಪ್ಪಿದರೆ ಅಳುವ ಕೂಸಿನ ನೆತ್ತಿಯನ್ನು ಕುಕ್ಕದೆ ಇರುವರೆ? ಕೋಗಿಲ ಮರಿಗೆ ಜನ್ಮವಿತ್ತಳು ಕೋಗಿಲ ತಾಯಿ. ಬಾಣಂತಿ ತನ್ನ ಹಿತವನ್ನೆ ನೋಡಿಕೊಂಡಳು. ಇನ್ನೂ ಕಣ್ಣು ತೆರೆಯದ ಮಗುವನ್ನು ತೊಟ್ಟಿಲಿಂದ ಬಿಸುಟಿದಳು. ಕಾಗೆಗಳ ಪಾಲು ಮಾಡಿದಳು. ಕಾಗೆ ಕಾಗೆಯೆ ಸರಿ. ಕೋಗಿಲ ತಮ್ಮ ಮಗುವಲ್ಲವೆಂದು ತಿಳಿದು ಬಡಿದು ಓಡಿಸಿದವು. ಪರಪುಟ್ಟ ನೋಡು ತಮ್ಮ!'

'ಜಗದ ಮಕ್ಕಳೆಲ್ಲ ಪರಪುಟ್ಟರೆ ತಾಯಿ!'

'ಯಾರು ಹೇಳುತ್ತಾರೆ? ತಾಯ ತೋಳಿನ ಕೂಸು ಪರಪುಟ್ಟವೇ?' ಅವರ ಈ ಮಾತನ್ನು ಕೇಳಿ ಸುಮ್ಮನಾದೆ. ತಾಯಿ ಮುಂದುವರೆಸಿದರು ತಮ್ಮ ಮಾತನ್ನು.

'ಕ್ಷಣ ಕ್ಷಣಕ್ಕೂ ಬಿಸಿಲು ಏರುತ್ತಿದೆ. ಹೊರಗೆ ಹೋದರೆ ನೆತ್ತರು ಕುದಿಯುತ್ತದೆ. ಕುಳಿತಲ್ಲಿಯೆ ಇಷ್ಟು ನೋವು. ಬೆಂದ ದೇಹಕ್ಕೆ ನೊಂದ ಮನದ ಕಾಟ ಬೇರೆ. ಕೋಗಿಲೆ ತಾಯ ಕಳೆದು ಕೊಂಡಿದೆ. ಮಗು, ಉಣಿಸು ವವರಿಲ್ಲ. ಹಾಡು ಕಲಿಸುವವರಿಲ್ಲ. ಅಪ್ಪಿ ನಲಿಯುವವರಿಲ್ಲ. ತಾಯ ನೆನೆದುಕೊಂಡು ಅಳುತ್ತಿದೆ. ಎಲ್ಲಿ ಹೋದಳೊ ತಾಯಿ. ಹಡೆದು ಬಿಸುಟ ಎಲ್ಲಿ ಹೋದಳೊ ಹುಚ್ಚಿ!'

ತಾಯ ಮುಖ ಈ ಹೊತ್ತಿನಲ್ಲಿ ನೋಡಿದೆ. ಕಣ್ಣೀರು ದಳದಳನೆ ಉದುರುತ್ತಿದ್ದವು. ಅರ್ಥ ನನಗೆ ಸರಿಯಾಗಿ ಹೊಳೆಯಲಿಲ್ಲ. ಕಾರಣವೇನು? ತಾಯಿಯನ್ನು ಕಳೆದುಕೊಂಡ ಮನವೇ?

' ಕೋಗಿಲೆಗೆ ತಾಯಿ ಇಲ್ಲದಾಗಿದೆ. ' ಅವ್ವಾs ' ಅವ್ವಾs ' ಎಂದು ಒಂದೇ ಸವನೆ ಹಲುಬುತ್ತಿದೆ. ಕೇಳಿದೆಯಾ ' ಅವ್ವೊs ' ' ಅವ್ವೊs ? ' ತಾಯಿ ಬಾರಳೇನು ? ಮಗು ಅಳುವುದ ಕೇಳಿ ಬಾರಳೇಕೆ ಬಡವಿ ? '

' ಅವ್ವಾ, ಅದು ' ಕುಹೂs ' ಎಂದು ಕೂಗುತ್ತಿದೆ. ನಿನಗೆ ಹಾಗೆ ಕೇಳುತ್ತಿದೆ ' ಎಂದೆ.

' ಹುಚ್ಚ ನೀನು. ' ಕುಹೂs ' ಎಂದರೇನು ? ' ಅವ್ವೊs ' ಎಂದು ಒದರುತ್ತಿದೆ. ನನಗೆ ಸರಿಯಾಗಿ ಕೇಳುತ್ತಿದೆ. '

ತಾಯ ಮುಖ ಮತ್ತೆ ನೋಡಿದೆ. ಕಳೆದ ತಾಯಿಯನ್ನು ನೆನೆದು ಕೊಂಡು ಕಣ್ಣೀರುದುರಿಸುವ ತಾಯಿಯನ್ನು ನೋಡಿದೆ. ಕೋಗಿಲೆಯ ನಿಜ ಹೃದಯವನ್ನು ತಾಯಿ ತಮ್ಮ ರೀತಿಯಲ್ಲಿ ಅರಿತುಕೊಂಡಿದ್ದರು. ನನ್ನ ಅಮ್ಮನನ್ನು ನೆನೆದುಕೊಂಡು ಅಳುತ್ತಿದ್ದರು ತಾಯಿ. ಕೋಗಿಲೆಯಲ್ಲಿ ತಾಯಿಗಾಗಿ ಹೃದಯ ಮಿಡಿಯುವದನ್ನು ನನ್ನ ತಾಯಿ ಗುರುತಿಸಿದ್ದರು. ಸಹಜವೆ ಅದು.

' ಅವ್ವೊ ' ಅವ್ವೊ ' ಎಂದು ಕೋಗಿಲೆ ಮೇಲಿಂದ ಮೇಲೆ ಕೂಗ ತೊಡಗಿತು. ' ಜಗ ಜುಮ್ಮೆಂದಿತು. '

ಯಾವ ಮಂತ್ರ ಇದು ?

---

# ಮಾದಿ ಹಳ್ಳ ತುಂಬಿ ಬಂದಾಗ.

ನಮ್ಮೂರ ಜನ ಕಡಲ ಕಂಡಿಲ್ಲ. ತುಂಗೆ ಗಂಗೆಯರ ನೀರನೀಂಟಿಲ್ಲ. ಊರ ಮಗ್ಗುಲಲ್ಲಿಯೆ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವ ಮಾದಿಯನ್ನು ಕಂಡಾಗ ಅವರ ಆನಂದಕ್ಕೆ ತೀರವಿಲ್ಲ. ತುಂಗೆಯ ದಡದಲ್ಲಿ ನಿಂತು ಕರುನಾಡಿನ ವೈಭವವನ್ನು ನೆನೆದು ಹಿಗ್ಗುವ ಕವಿಯಂತೆ, ಗಂಗೆಯಲ್ಲಿ ಮಿಂದು ಸ್ವರ್ಗದ ಐಸಿರಿಯನ್ನು ಊಹಿಸಿ ಸುಖಿಸುವ ಭಾವಿಕನಂತೆ ನಮ್ಮೂರ ಜನ ಮಾದಿ ಹಳ್ಳ ತುಂಬಿ ಬಂದಾಗ ಸಂತೋಷದಿಂದ ಮೈಮರೆಯುವರು. ಹಳ್ಳ ಹೇಳುವ ಚೆಲುವಿನೊಸಗೆಯನ್ನು ಬಹು ಆಸ್ಥೆಯಿಂದ ಕೇಳಿ ಹರ್ಷಚಿತ್ತರಾಗುವರು. ಅವಳಿಗೂ ನಮ್ಮೂರವರಿಗೂ ಯಾವ ಜನುಮದ ಬಾಂಧವ್ಯವೊ !

ಹಳ್ಳದ ಹರವು ವಿಸ್ತಾರವಾಗಿಲ್ಲ. ದೊಡ್ಡ ಕಾವಲಿಯೆಂದರೆ ನಡದೀತು. ಆದರೂ ಊರ ಮಕ್ಕಳು ಬಹು ಉತ್ಸಾಹದಿಂದ ಅದರ ಓಟವನ್ನು ಬಣ್ಣಿಸುತ್ತಾರೆ. ಮಾದಿಗಿಂತ ಸೆಳವಿನ ಹಳ್ಳ ಜಗತ್ತಿನಲ್ಲಿ ಇನ್ನೊಂದಿಲ್ಲವೆಂದೇ ಅವರ ಅಭಿಪ್ರಾಯ.

ಬಿರುಸಾಗಿ ಮಳೆ ಬಂದ ದಿನ ಮಾದಿ ತುಂಬಿ ಬರಲೇ ಬೇಕು. ಆ ದಿನ ಅಗಸೆಯ ಒಡ್ಡಿನ ಮೇಲೆ ಊರವರೆಲ್ಲ ನಿಂತುಕೊಂಡು ಕೇಕೆ ಹೊಡೆಯುವದನ್ನು, ಚೀರಾಡುವುದನ್ನು ನಡಸಿಯೇ ಇರುತ್ತಾರೆ. ಹೊಲಗಳಿಗೆ ಹೋದ ರೈತರು, ಹೆಂಗಳು, ದನಗಾಹಿಗಳು, ಸಣ್ಣ ಸಣ್ಣ ಕರುಗಳು, ಹಳ್ಳದ ಆಚೆಗೆ ನಿಂತುಕೊಂಡಿರುತ್ತವೆ. ಈ ಕಡೆ ಹಿರಿಯರು ಅಲ್ಲಲ್ಲಿ ನೀರು ಆಳವಿಲ್ಲದೆಡೆ ನಿಂತು ಹಗ್ಗ ಬಿಟ್ಟು ಆಚೆಯ ಮಗ್ಗುಲಲ್ಲಿದ್ದವರನ್ನು ಜಗ್ಗುವರು. ತೊಟ್ಟಿಲ ಬಿಟ್ಟು ಹೆಂಗಳೆಯರನ್ನು ಕರೆದುಕೊಂಡು ಬರುವ ಸಮಯವನ್ನು ನಿರೀಕ್ಷಿಸುವಂದು ಏನು ಆನಂದ ! ಆಗ ಹುಡುಗರು ಜೋರಾಗಿ ಕೇಕೆ ಹೊಡೆಯುವರು; ಚಪ್ಪಾಳೆಯಿಕ್ಕುವರು. ತೊಟ್ಟಿಲಲ್ಲಿ ಕುಳಿತ ಹೆಂಗಳೆಯರ ಅವತಾರ ಆಗ ನೋಡಬೇಕು !

ಏರಿ ಬಂದ ಮಾದಿ ಇಳಿಯುವ ರೀತಿಯನ್ನು ಹುಡುಗರು ಗೆರೆ ಕೊರೆ ಕೊರೆದು ಪರೀಕ್ಷಿಸುವರು. ಹತ್ತನೆಯ ಗೆರೆಯನ್ನು ನೀರು ದಾಟಿ ಬಂದಾಗ ಅವರ ಸಂತಸಕ್ಕೆ ಅಂಚೆಯಿಲ್ಲ. ನೀರು ಒಡ್ಡನೇರಿ ಬಂದು ಊರಿನ ಮನೆಗಳನ್ನು ಸೇರಿದರಂತೂ ಇನ್ನೂ ಹೆಚ್ಚಿಗೆ ಆನಂದ. ಆ ಕಡೆ ಸ್ಮಶಾನ ಭೂಮಿ, ಹೊಲ ಗದ್ದೆಗಳು, ಈ ಕಡೆ ಶಾಲೆಯ ಗುಡಿ, ಈಚೆಗೆ ಊರು—ಎಲ್ಲಾ ನೀರಲ್ಲಿ ನಿಂತರೆ ಮಕ್ಕಳಿಗೆ ಹಬ್ಬದ ಸಂಭ್ರಮ ಹತ್ತಿರ ಬಂದಂತೆಯೆ.

ಅಂತಹ ಸಂಭ್ರಮದ ದಿನಗಳನ್ನು, ನನ್ನ ಓರಿಗೆಯ ಗೆಳೆಯರೊಂದಿಗೆ ಕಳೆದ ಆ ಬಾಲ್ಯದ ದಿನಗಳನ್ನು ಎಷ್ಟೆಂದು ನೆನಪು ಮಾಡಿಕೊಳ್ಳಲಿ !

* * * *

ಒಂದು ಸಂಜೆ ಐದು ಘಂಟೆ ಆಗಿತ್ತು. ಶಾಲೆ ಬಿಡುವುದಕ್ಕೆ ಇನ್ನೂ ಒಂದು ತಾಸು ಉಳಿದಿತ್ತು. ನಾವೆಲ್ಲ ಹುಡುಗರು ಹೊರಗೆ ಅಂಗಣದಲ್ಲಿ ಆಡುತ್ತಿದ್ದೆವು.

ತಂಗಾಳಿ ಬೀಸಿತು. ಎಲೆಗಳು ಉದುರಿದವು. ಮೋಡಗಳು ಬಂದವು. ಗುಡುಗುಗಳು ಗುಡುಗಾಡಿದವು.

ಶಾಲೆಯೊಳಗಿಂದ ಶಿಕ್ಷಕರ ಕೂಗು ಬಂದಿತು. ನಾವೆಲ್ಲ ಒಳಗೆ ಹೋಗಿ ಕುಳಿತೆವು. ಆಗಲೆ ಮಳೆ ಜೋರಿನಿಂದ ಬರತೊಡಗಿತು. ಆಲಿಕಲ್ಲಿನ ಗಾತ್ರದಷ್ಟು ಹನಿ. ಹಾ ಹಾ ಎನ್ನುವುದರೊಳಗಾಗಿ ಮಾದಿ ತುಂಬಿ ಬಂದಿತು.

ಶಾಲೆಯ ಹುಡುಗರಿಗೆಲ್ಲ ಆನಂದವಾಯಿತು. ಇನ್ನು ಕೆಲ ಹೊತ್ತಿನಲ್ಲಿ ನೀರು ಬಂದು ಶಾಲೆಯ ಒಳಭಾಗವನ್ನು ಹೊಕ್ಕು ಬಿಡುವುದು. ಶಿಕ್ಷಕರು ಇನ್ನೂ ಹುಡುಗರನ್ನು ಒಳಗೆ ಕುಳ್ಳಿರಿಸಿಕೊಂಡಿರುತ್ತಾರೆಯೋ ?

ನಮ್ಮ ಇಚ್ಛೆಯಂತೆ ಮಾದಿ ಶಾಲೆಯ ಅಂಗಣದಲ್ಲಿ ಸುಳಿದಾಡತೊಡಗಿದಳು. ಅಷ್ಟೊತ್ತಿಗೆ ಶಿಕ್ಷಕರ ಆಜ್ಞೆಯಾಯಿತು. 'ಪಾಟೀಗಂಟು ತಕ್ಕೊಂಡು ಎಲ್ಲರೂ ಎದ್ದು ನಿಲ್ಲಿರಿ. ಒಂದು, ಎರಡು, ಮೂರು....ಹಾ.... ನಡೀರಿ. ಶಾಲೆ ಬಿಟ್ಟಿತು' ಎಂಬ ಅಪ್ಪಣೆ ಶಿಕ್ಷಕರ ಬಾಯಿಂದ ಬರತೊಡಗಿದಾಗಲೆ ಹುಡುಗರೆಲ್ಲ ಶಾಲೆಯ ಹೊಸ್ತಿಲಲ್ಲಿ ನಿಂತು ಮಾದಿಯನ್ನು ಬಿಡು

ಗಣ್ಣಿನಿಂದ ನೋಡುತ್ತಿದ್ದರು. ಅಲ್ಲಿಯೇ ನಿಂತುಕೊಂಡು ಬೀಡಿ ಹಾಕ ಬಹುದಿತ್ತು. ಅವರ ಬೆತ್ತ ಬಂದು ಬೆನ್ನನಪ್ಪಿದರೆ....... !

ಶಾಲೆಯ ಆವರಣದಿಂದ ಪಾರಾಗಿ ಬಂದೆವು. ಅಗಸೆಯ ಒಡ್ಡನೇರಿ ನಿಂತು ಮಾಡಿಯ ಹರಹನ್ನು ನೋಡಿದೆವು. ಅಜ್ಜಿಯ ದಂಡೆಯಲ್ಲಿ ಬೆಂಗಸು ಹುಲ್ಲಿನ ಹೊರೆ ಇಳುಹಿಕೊಂಡು ಆಶಾಪೂರ್ಣ ದೃಷ್ಟಿಯಿಂದ ನಮ್ಮನ್ನು ನೋಡುತ್ತಿದ್ದರು. ಆ ರಾತ್ರಿಯನ್ನೆಲ್ಲ ಅವರು ಅಲ್ಲಿಯೇ ಕಳೆದರೆ ನಮಗೆ ಬಹಳ ಆನಂದವಾಗುವಂತೆ ತೋರುತ್ತಿತ್ತು. ನಮಗೇನೆ ಅಂತಹ ಪ್ರಸಂಗ ಒದಗಿದ್ದರೆ ಹಿಜಜ್ಞಾ ನೀರನ್ನು ದಾಟಿ ಬರುವ ಮನಸ್ಸು ಮಾಡದೆ ಮಾದಿ ಇಳಿವಾಗ ಮಾತ್ರ ಊರನ್ನು ಸೇರುತ್ತಿದ್ದೆವು.

ಊರ ಜನ ಹಳ್ಳದಾಚೆಗೆ ನಿಂತವರನ್ನು ಊರಿನ ದಡಕ್ಕೆ ತಂದು ಮುಟ್ಟಿಸುವ ಸಾಹಸ ಕಾರ್ಯದಲ್ಲಿ ನಿರತರಾಗಿದ್ದರು. ಅಲ್ಲಲ್ಲಿ ಹುಡುಗರು ನೀರಿನ ಏರಿಳಿತವನ್ನು ನೆರೆ ಕೂಡು ನೋಡುತ್ತ ನಿಂತಿದ್ದರು.

ಆಗ ಒಂದೆಡೆ ನಾನು, ನನ್ನ ತಮ್ಮ ಶಿವ ಕಾಗದದ ದೋಣಿಯನ್ನು ಮಾಡಿದೆವು. ನೀರಿನಲ್ಲಿ ತೆಪ್ಪ ತೇಲಿ ಬಿಟ್ಟೆವು. ಯಾರ ತೆಪ್ಪ ದೂರ ದೂರ ತೇಲಿ ಹೋಗುವದೋ ಅವರೇ ವಿಜಯಶಾಲಿಗಳು. ವಿಜಯದ ಶರ್ಯತ್ತು ಹೂಡಿ ಕಾರ್ಯರಂಗಕ್ಕೆ ಕೈ ಹಾಕಿದೆವು.

ತೆಪ್ಪ ಗೊತ್ತು ಮಾಡಿದ ವೇಳೆಗೆ ನೀರಿನ ಮೇಲೆ ನಡೆಯ ತೊಡಗಿದವು. ಯಾರ ತೆಪ್ಪ ಮುಂದು ಮುಂದು ಸಾಗಿ ಹೋಗುತ್ತಿದೆ ?

ಉತ್ಸಾಹದ ಮೇಲೆ ಉತ್ಸಾಹವನ್ನೋಡಿಸಿದೆವು. ಕೇಕೆಯ ಮೇಲೆ ಕೇಕೆ ಹಾಕಿದೆವು. ಕರತಾಡನದ ಮೇಲೆ ಕರತಾಡನವನ್ನಿಕ್ಕಿದೆವು. ವಿಜಯದ ಹಾರ ಇನ್ನೂ ಯಾರ ಕೊರಲನೇರಿ ಬಂದಿರಲಿಲ್ಲ. ಅಷ್ಟರಲ್ಲಿ ‘ ಆಗೋ ನನ್ನ ದೋಣಿ ಮುಂದೆ....? ’ ಎಂದು ಶಿವನು ಕೂಗುತ್ತ ಜಿಗಿದಾಡತೊಡಗಿದನು. ಆಗೊಂದು ಘಟನೆ ನಡೆದು ಹೋಯಿತು. ಅದುವೆ ಈ ನೆನಹಿಗೆ ಕಾರಣ.

ಶಿವನ ತೆಪ್ಪ ಮುಳುಗುವದರಲ್ಲಿದ್ದಿತು! ಆಗ ಆತ ನನ್ನನ್ನು ಸೋಲಿಸ ಲೆಂದು ಯೋಚನೆ ಮಾಡಿ ಹೌರಾಗಿ ಕಲ್ಲೊಂದನ್ನು ಎತ್ತಿಕೊಂಡು ನನ್ನ

ದೋಣಿಯೆಡೆಗೆ ಬೀಸಿ ಬಿಟ್ಟನು. ಅಕಸ್ಮಾತ್ತಾಗಿ ಆತ ಬೀಸಿದ ಕಲ್ಲು ಅವನ ತೆಪ್ಪಕ್ಕೇ ಬಡಿದು ಮುಳುಗಿ ಹೋಯಿತು. ಇನ್ನೇನು ಶಿವ ಸೋತು ಹೋದ !

ಅಂದಿನ ಸಂಜೆಯ ನೆನಹು ಸ್ಮೃತಿಪಥದಿಂದ ನನ್ನ ಬಾಳ ತೆಪ್ಪ ಮುಳುಗಿ ಹೋದಾಗಲೆ ಅಳಿಯುವುದು !

*　　　*　　　*　　　*

ಬಾಲ್ಯದ ಆ ಆಟಗಳನ್ನು ಇಂದು ಮಾದಿಯೊಡನೆ ನಾನು ಮತ್ತೆ ತಿರುಗಿ ಆಡುವಂತಿಲ್ಲ. ಹೋದ ಹೊತ್ತು ತಿರುಗದು.

ಮಾದಿಯ ಆಚೆಗಿರುವ ಮಸಣದಲ್ಲಿ ಶಿವನನ್ನು ಮಲಗಿಸಿ ಬಂದ ಎಂಟು ದಿನಗಳ ಮೇಲೆ ಮಳೆ ಜೋರಾಗಿ ಬಂದಿತು. ಸಂಜೆಗೆ ಮಾದಿ ಪೂರ್ತಿಯಾಗಿ ತುಂಬಿ ಬಂದಳು.

ಊರಿನ ತುಂಬೆಲ್ಲ ಕೇಕೆಯ ಸಪ್ಪಳವೇ ಸಪ್ಪಳ. ಹುಡುಗರ ಚೀರಾಟ, ಹಿರಿಯರ ಕೂಗು, ಅಗಸೆಯ ಬಾಗಿಲನ್ನು ದಾಟಿ ಬಂದು ಹಳ್ಳಿಗರನ್ನು ಎಬ್ಬಿಸುತ್ತಿದ್ದಿತು.

ಮನೆಯಲ್ಲಿ ಕುಳಿತ ನನಗೆ ಮಾದಿ ತುಂಬಿ ಬಂದಳೆಂಬ ಕೂಗು ಕೇಳಿ ಬಂದಿತು. ಮನೆ ಬಿಟ್ಟು ನಡೆದು ಅಗಸೆಯ ಒಡ್ಡಿನ [illegible] ಬಂದು ನಿಂತೆ.

ಅಗೋ, ಅದೇ ತಾಣದಲ್ಲಿ ಅಂದು ನಾವು, ತಮ್ಮ [illegible] ದೋಣಿ ಬಿಟ್ಟು ಆಡಿದೆವಲ್ಲ! ಅವನ ತೆಪ್ಪ ಮುಳುಗಿ [illegible] ದುರಂತವನ್ನು ಸೂಚಿಸಿತೇ ?

ವಿಚಾರ ತೇಲಿ ತೇಲಿ ಬಂದವು. ಸುತ್ತು ಕಡೆಗೆ ನೋಡಿದೆ. ದಂಗಳೆಯರನ್ನು, ದನಗಾಹಿಗಳನ್ನು, ಕರು ಮರಿಗಳನ್ನು ಆ ಕಡೆಯಿಂದ ಈ ಕಡೆಗೆ ದಾಟಿಸುವ ಕಾರ್ಯ ನಡೆದೇ ಇದ್ದಿತು.

ನಾನು ಒಂದೆಡೆಗೆ ಹೋಗಿ ನಿಂತೆ. ದೂರದಿಂದ ಏನೋ ಒಂದು ತೆಪ್ಪ ತೇಲಿ ತೇಲಿ ಬರುವಂತೆ ತೋರಿತು. ಕಣ್ಣರಳಿಸಿ ನೋಡಿದೆ. ಸಾಗಿ ಬಿದ್ದು ನೋಡಿದೆ.

ಏನದು ? ಅಂದು ಮುಳುಗಿದ ಶಿವನ ತೆಪ್ಪ ತೇಲಿ ತೇಲಿ ಬರುತ್ತಿದೆಯೋ ? ನೋಡಿದೆ. ಅದು ಹತ್ತಿರ ಬರುವನಕೂ ನೋಡಿದೆ. ಶಿವನ ತೆಪ್ಪವೇ ?

ಅಲ್ಲ........ ! ತೆಪ್ಪ ಅಲ್ಲ. ಸುಡುಗಾಡದಲ್ಲಿ ಶಿವನ ಗೋರಿಯ ಹತ್ತಿರ ಚೆಲ್ಲಿದ ಅವನ ಅಂಗಿ, ಶಾಲು ಕಂಟಿಗೆ ಸಿಕ್ಕು ತೇಲಿ ತೇಲಿ ಬರುತ್ತಿವೆ !

ನೋಡಿದೆ. ಹುಚ್ಚನಂತೆ ನೋಡಿದೆ. ಶಿವನ ಅರಿವೆ ನನ್ನಲ್ಲಿಗೆ ಬರಲಿಲ್ಲ. ಹರಿವ ನೀರಿನೊಂದಿಗೆ ಹರಿದು ಹೋದವು.

ಮನೆಯ ಕಡೆಗೆ ತುಂಬಿ ಬಂದ ದುಃಖದೊಂದಿಗೆ ಮರಳಿದೆ. ಹಾದಿ ಹಳ್ಳ ತುಂಬಿ ಬಂದಾಗ ಈ ನೆನಹು ಕಾರಂಜಿಯಂತೆ ಪುಟಿ ಪುಟಿದು ಬಂದು ಕಣ್ಣನ್ನು ಮಂಜುಗೊಳಿಸಿ ಬಿಡುತ್ತದೆ !

---

# ತುಂಬಿ ಬಂದಿತ್ತು

ಆಸೆಯೊಂದು ಅನ್ಮೃತ ಮಂತ್ರ. ಅದರ ನೆರವನ್ನು ಮನುಷ್ಯನು ಪಡೆಯದೆ ಇದ್ದಲ್ಲಿ ಬಾಳಿನಲ್ಲಿ ಆತನಿಗೆ ಸೌಖ್ಯವೇ ಇಲ್ಲ. ನಾಳೆ ಎಂಥದೊ ಕುತ್ತು ನಮಗಾಗಿ ಹೊಂಚು ಹಾಕಿದ್ದರೂ ಅದು ನಮಗೆ ಕತ್ತಲು. ಆದರೂ ಆಸೆಯ ಬೆಳಕಿನಲ್ಲಿ ನಡೆದು ಹೋಗುವ ನಾವು ಕತ್ತಲನ್ನು ಬೆಳುದಿಂಗಳೆಂದು ಭಾವಿಸುತ್ತೇವೆ. ಬೇನೆ ಬಿದ್ದ ಮನುಷ್ಯ ಕೊನೆಯ ಉಸಿರನ್ನು ಎಳೆಯು ವನಕೂ ಅವನ ಉಳಿವಿಗಾಗಿ ಹೋರಾಡುತ್ತೇವೆ. ಉಸಿರು ನಿಂತ ಮೇಲೂ ನಾಡಿ ಹಿಡಿದು ನೋಡುತ್ತೇವೆ. ಅದು ತಪ್ಪೇನು ?

ಮಕ್ಕಳ ಭವಿತವ್ಯದಲ್ಲಿ ಹಡೆದವರಿಗೆಷ್ಟು ಆಸೆ ! ತಮ್ಮನನ್ನು ಕಲಿ ಯಲು ಪರವೂರಿಗೆ ಬೀಳ್ಕೊಡಲು ಮನೆಯವರೆಲ್ಲರೂ ಸಜ್ಜಾಗಿ ನಿಂತಿದ್ದರು. ತಾಯಿಗೆ ಮುಂಜಾವಿನಿಂದಲೂ ಸಮಾಧಾನವಿರಲಿಲ್ಲ. ಒಮ್ಮೆ ಒಂದು ಕ್ಷಣ ತಮ್ಮನ ಮುಂದೆ ಬಂದು ನಿಂತು ಮಾತನಾಡಿ ಮತ್ತೆ ಅಡಿಗೆ ಮಾಡಲು ಒಳಗೆ ಹೋಗುವರು. ಆತನು ಮನೆ ಬಿಟ್ಟು ಹೊರಡುವವರೆಗೂ ' ಜೋಕೆ ' ಎಂದು ಎಷ್ಟು ಬಾರಿ ಹೇಳಿದರು ತಾಯಿ !

ಮನೆಯ ಅಂಗಳ ಬಿಟ್ಟ ಮೇಲೆ ತಮ್ಮನ ಬದಿಯಲ್ಲಿ ಅಪ್ಪ, ಅವರ ಹಿಂದೆ ನಾನು ಪಯಣಿಗನನ್ನು ಕಳುಹಿಸಲು ನಡೆದೆವು. ಅಪ್ಪ ಹೇಳುವ ಹಿತವಚನಗಳನ್ನು ನಾನು ಮೂಕನಾಗಿ ಕೇಳುತ್ತಿದ್ದೆ. ತಮ್ಮ ' ಹೊಂ ' ಗೊಡುತ್ತಿದ್ದ.

ಅಗಸೆಯ ಬಾಗಿಲು ಹಿಂದುಳಿಯಿತು. ಸ್ಮಶಾನ ಭೂಮಿ ಸರಿಯಿತು. ಕೆರೆಯ ಒಡ್ಡು ಬಂದಿತು. ಮೂವರೂ ನಿಂತೆವು. ಅಪ್ಪ ತಮ್ಮನಿಗೆ ಉಪದೇಶ ಕೊಡುತ್ತಿದ್ದರು ಅವಕ್ಕೆ ಪ್ರತ್ಯುತ್ತರವೂ ಬರುತ್ತಿತ್ತು.

' ಆರೋಗ್ಯ ಹಿಡಿತದಲ್ಲಿರಲಿ. '

' ಹೊಂ. '

'ಓದು ಮಿತಿಯಾಗಿ ಸಾಗಲಿ'

'ಹೂಂ'

'ಒಳ್ಳೆಯವರ ಸಹವಾಸವಿರಲಿ'

'ಹೂಂ'

'ಗುರುಜನಕ್ಕೆ ವಿಧೇಯನಾಗಿರು'

'ಹೂಂ'

'ಮುಂದಾಗುವ ಸಾಹಸ ಮಾಡು'

'ಹೂಂ'

'ನಿನ್ನ ಏಳ್ಗೆಯಲ್ಲಿ ನನಗೆ ಆಸೆ'

'ಹೂಂ'

ಅಪ್ಪನ ಉಪದೇಶ ಇದು. ಅವಕ್ಕೆ ಸರಿಯಾಗಿ ತಮ್ಮನ ಭಾಷೆ. ನಾನು ಮೌನದಿಂದ ಕಿವಿಗೊಡುತ್ತಿದ್ದೆ.

'ಹೊತ್ತು ಇಳಿಯುತ್ತದೆ. ಇನ್ನು ಹೋಗು' ಎಂದರು ಅಪ್ಪ. ತಮ್ಮ ಹಿರಿಯರಿಗೆ ನಮಿಸಿದ. ನಮ್ಮನ್ನು ಹಿಂದೆ ಬಿಟ್ಟು ಮುಂದೆ ಮುಂದೆ ಹೋದ. ತಿರುಗಿ ಬರುವಾಗ ನಮ್ಮ ಕಂಠ ತುಂಬಿತ್ತು.

*　　　*　　　*　　　*

ಆಸೆಗುಂಬಳಕಾಯಿ ಹಿಡಿದು ನೀರಿನಲ್ಲಿ ಆಡುವವನಿಗೆ ಎಷ್ಟು ಧೈರ್ಯ ಇರಬಲ್ಲದು! ಬಳ್ಳಿಯ ನೆರವಿನಿಂದ ಗಿಡದ ಮೇಲೇರುವವನಿಗೆ ಸ್ಥೈರ್ಯ ಎಲ್ಲಿಯದು? ಗಾಳಿ ಬೀಸಿದಾಗ ಸಮುದ್ರ ಹೊಯ್ದಾಡಿ ಹೋಗುತ್ತದೆ. ಆನುಗೋಲು ಕಳೆದಾಗ ಅಂಧಕ 'ಪೆಪಪಳಿಸಿ' ಬಿಡುತ್ತಾನೆ. ಮನುಷ್ಯನಿಗೆ ತಾನು ನೆಚ್ಚಿದ ಆಸೆಬಟ್ಟಲು ಬೋರಲಿಟ್ಟಾಗ ಹೇಗಾಗಬೇಡ?

ತಾನು ಕಲಿಯಲು ಹೋದ ಊರಿನಿಂದ ಮರಳಿ ಬಂದ ತಮ್ಮ ಮಸಣಕ್ಕೆ ನಡೆದ. ವಿಧಿಯ ಆಸೆ ಅಂತಿತ್ತು.

ಅದೇ ಊರಿನ ಸಾಲೆಗೆ ಅಪ್ಪ ವರ್ಗವಾಗಿ ಹೋದ ಸುದ್ದಿ ಬಂದಿತು. 'ವಿಧಿಯ ಆಜ್ಞೆ'ಗೆ ಮನ್ನಣೆ ಕೊಡಲೇಬೇಕಾಯಿತು.

## ತುಂಬಿ ಬಂದಿತ್ತು

ಗಾಯದ ಮೇಲೆ ಬರೆ. ನೋವಿನ ಮೇಲೆ ಏಟು. ಬೋರಲಿಟ್ಟ ಆಸೆ ಪಾತ್ರೆಗೆ ಕಲ್ಲು.

ತಂದೆಯನ್ನು ಅಗಸೆ ಬಾಗಿಲ ತನಕ ಕಳುಹಿಸಿ ಬರಬೇಕೆಂದು ನಡೆದೆ. ಅಗಸೆ ಬಾಗಿಲು ಬಂದಿತು. ನಿಂತೆ.

‘ ಇನ್ನಷ್ಟು ಮುಂದಕ್ಕೆ ಬಾ ’ ಎಂದರು ಅಪ್ಪ. ನಾನು ಮೌನವಾಗಿದ್ದೆ. ‘ ಬಾ. ನಿಲ್ಲಬೇಡ ’ ಎಂದು ಮತ್ತೆ ಹೇಳಿದರು. ದುಃಖ ಉಕ್ಕಿ ಬರುತ್ತಿತ್ತು ಇಬ್ಬರಿಗೂ! ಮೌನವಾಗಿ ಇಬ್ಬರೂ ಸಾಗಿದ್ದೆವು. ಸ್ಮಶಾನ ಭೂಮಿ ಬಂದಿತು.

‘ ನಾನು ಹಿಂದಿರುಗುತ್ತೇನೆ ನಿಲ್ಲಿರಿ ’ ಎಂದೆ. ‘ ಆಂ ’ ಎಂದರು ಅಪ್ಪ. ಅವರ ಉಸಿರು ಎಂಥದೊ ಕುತ್ತದಿಂದ ಪಾರಾಗಿ ಬಂದಂತೆ ತೋರಿತು. ‘ ಹೋಗಿ ಬರ್ರಿ ’ ಎಂದು ನಮಿಸಿದೆ. ಇಬ್ಬರ ಕಣ್ಣಿನಲ್ಲೂ ನೀರು ಆಡುತ್ತಿತ್ತು. ಅವರಿಗೆ ಮಾತನಾಡಲು ಬರಲಿಲ್ಲ. ಹೊರಳಿ ಹೊರಳಿ ನೋಡುತ್ತ ಮುಂದಕ್ಕೆ ಸಾಗಿ ಹೋದರು.

ನಾನು ನಿಂತಲ್ಲಿಯೇ ನಿಂತಿದ್ದೆ. ದೂರ ಹೋದ ಮೇಲೆ ‘ ತಿರುಗು ’ ಎಂದು ಅಪ್ಪ ಕೈ ಬೀಸಿದರು. ಆಗ ತುಂಬಿ ಬಂದಿತ್ತು.

---

# ಸೋತು-ಗೆದ್ದ ಗೆಳೆಯರು

ವ್ಹರ್ನಾಕ್ಯುಲರ ಫಾಯನಲ್ ಪರೀಕ್ಷೆಯ ಕೊನೆಯ ದಿನ! ಚಂದೂನ ಕೈಗೆ ಪ್ರಶ್ನೆಯ ಕಾಗದ ಬಂದಿತು. ಓದಿದ. ಬಹು ಉತ್ಸಾಹದಿಂದ ಓದಿದ. ಕೊನೆಯ ಪ್ರಶ್ನೆ ಅರ್ಧ ಓದುತ್ತಿದ್ದಂತೆಯೆ ಅವನ ಹಿಗ್ಗು ಅಳತೆ ಮೀರಿ ಹೋಯಿತು. ಸರಿ. ನಕ್ಕೇ ಬಿಟ್ಟ. ಅತ್ತಿತ್ತ ನೋಡಿ ಬೆನ್ನನ್ನೂ ಚಪ್ಪರಿಸಿಕೊಂಡ. ಹೌರಾಗಿ ಕೈಗಳನ್ನು ತೀಡಿಕೊಂಡು ಉತ್ತರ ಕಾಗದಗಳ ಮೇಲೆ ಲೇಖನಿ ಸರಸರನೆ ಓಡತೊಡಗಿದ. ಹಿಂದಿನ ರಾತ್ರಿ ತನ್ನ ಗೆಳೆಯನೂ ತಾನೂ ಕೂಡಿ ಬಿಡಿಸಿದ ಪ್ರಶ್ನೆಗಳೇ ಪರೀಕ್ಷೆಗೆ ಬೀಳಬೇಕೆ?

ಕೊಟ್ಟ ಅವಧಿ ಮುಗಿಯುವದಕ್ಕೆ ಇನ್ನೂ ಮುಕ್ಕಾಲು ತಾಸು ಉಳಿದಿತ್ತು. ಅಷ್ಟರಲ್ಲಿಯೇ ಚಂದೂ ಎಲ್ಲ ಪ್ರಶ್ನೆಗಳನ್ನು ಬಿಡಿಸಿ ಉತ್ತರ ಕಾಗದಗಳನ್ನು ಪರೀಕ್ಷಕರ ಕೈಯಲ್ಲಿ ಕೊಟ್ಟು ಹೊರಗೆ ಬಂದ. ಒಮ್ಮೆಲೆ ಮುಗಿಲ ಕಡೆಗೆ ನೋಡಿದ. ಬಾನು ಎಷ್ಟೆತ್ತರದವರೆಗೆ ಹೋಗಿರಬೇಕು? ಜಗತ್ತು ಎಷ್ಟು ವಿಶಾಲವಾಗಿರಬೇಕು? ಚಂದಣ್ಣ ಗುಣಿಸಿಯೇ ಗುಣಿಸಿದ. ಲೆಕ್ಕ ಹಾಕಿಯೇ ಹಾಕಿದ. ಅಂತೂ ಮುಗಿಲೆತ್ತರದವರೆಗೆ ಹಾರುವ ಸಾಹಸ ಮಾಡಿದ. ಆದರೆ ನಕ್ಷತ್ರಗಳು ಮುಗಿಲಾಚೆಗಿದ್ದುದನ್ನು ಆತ ಅರಿಯದೆ ಹೋದ. ಪ್ರಪಂಚವನ್ನೆಲ್ಲ ಕೆದರಿ ನೋಡುವ ಧೈರ್ಯ ತುಂಬ ಮಾಡಿದ. ಎಲ್ಲವನ್ನು ಕಂಡು ಬಂದಷ್ಟು ಸುಖ ಅವನಿಗೆ ಸಿಕ್ಕಂತೆಯೂ ಆಯಿತು. ಆದರೂ ಒಂದಿನಿತು ಅಶಾಂತಿಗೆ ಅವನ ಹೃದಯದಲ್ಲಿ ಇಂಬಿತ್ತು!

ಚಂದೂ ಪರೀಕ್ಷೆಯ ಕಟ್ಟಡದ ಇದಿರಿನಲ್ಲಿ ಕುಳಿತು ಭಾವನೆಯ ಗರಿ ಹರಹಿ ಸುತ್ತು ಲೋಕವನ್ನೆಲ್ಲ ಸಂಚಾರ ಮಾಡುತ್ತಲೇ ನಡೆದಿದ್ದ. ಒಂಟಿಯಾಗಿ ಹಾರುತ್ತ ಹೊರಟ ಹಕ್ಕಿ ಎಲ್ಲಿಯವರೆಗೆ ಹೋದೀತು? ಬಾನಿನ ಮಧ್ಯದಿಂದ ಚಂದಣ್ಣನ ಊಹೆಯ ಹಕ್ಕಿ ರೆಕ್ಕೆ ಸೋತು ಕೊನೆಗೊಮ್ಮೆ ಭೂಮಿಯ ಮೇಲೆ ಬಿದ್ದಿತು. ತಾನು ಎಲ್ಲಿ ಕುಳಿತಿದ್ದೇನೆಂಬುದರ ಅರಿವು ಅವನಿಗೆ ಆಗ ಉಂಟಾಯಿತು.

ಪರೀಕ್ಷೆಯ ಹೊತ್ತು ಮುಗಿಯುತ್ತ ಬಂದಿತು. ಎಚ್ಚರಿಕೆಯ ಗಂಟೆ ಬಾರಿಸಿತು. ಎರಡನೆಯ ಗಂಟೆಯೂ ಹೊಡೆಯಿತು. ಚಂದೂ ತನ್ನ ಸಂಗಡಿಗನ ದಾರಿಯನ್ನು ನೋಡಿಯೆ ನೋಡಿದ. ತಡ ಏಕೆ ಮಾಡಿದನೊ ಎಂದು ಮನಸ್ಸಲ್ಲಿ ನೂರಾರು ಬಾರಿ ಅಂದುಕೊಂಡ. ಇನ್ನೂ ಬರಲಿಲ್ಲ ಅವನ ಗೆಳೆಯ. ಕೊನೆಗೆ ತಾನೇ ಎದ್ದು ಹೋಗಿ ಬಾಗಿಲದ ಹತ್ತಿರ ನಿಂತುಕೊಂಡು ಒಳಗೆ ಮೊಗವಿಟ್ಟು ನೋಡಿದ.

ಶಿವಣ್ಣ ಸಪ್ಪೆ ಮುಖ ಮಾಡಿಕೊಂಡು ಕಾಗದ ಮುಸಿಕುಡಿಕೆಯನ್ನು, ಕೈಯಲ್ಲಿ ಹಿಡಿದುಕೊಂಡು ಬಾಗಿಲ ಕಡೆಗೆ ಬರುತ್ತಿದ್ದನು. ಚಂದಣ್ಣ ಅವನಿಗಾಗಿಯೆ ಕಾಯ್ದು ಕುಳಿತಿದ್ದ. ಉತ್ಸಾಹದಿಂದ ಸಂಗಡಿಗನ ಬರವನ್ನು ಕೋರಿದ. ಆದರೆ ಅವನ ಆನಂದಕ್ಕೆ ತಕ್ಕಂತ ಉತ್ತರ ಬರಲಿಲ್ಲ.

ಪರೀಕ್ಷೆ ಪೂರ್ತಿಯಾಗಿ ಮುಗಿದು ಹೋಯಿತು. ಉಮೇದವಾರರೆಲ್ಲ ಹಾಳು ಪರೀಕ್ಷೆಯನ್ನು ಶಪಿಸುತ್ತ ಕೈಲಿದ್ದ ಮಸಿ ಪಾತ್ರೆಗಳನ್ನು ಕಲ್ಲಿಗಪ್ಪಳಿಸುತ್ತ ಹೋದರು. ಕಾಗದ ದಾರಿಗುಂಟ ಹರಿಯುತ್ತ ನಗುತ್ತ ಕೆಲೆಯುತ್ತ ಹೋದರು. ತಮ್ಮ ತಮ್ಮ ಮನಸ್ಸಿಗೆ ತಕ್ಕಂತೆ ವರ್ತಿಸುತ್ತ ಎಲ್ಲರೂ ಹೊರಟು ಹೋದರು. ಪರೀಕ್ಷೆಯ ಮೇಲ್ವಿಚಾರಕರು ಉತ್ತರ ಕಾಗದದ ಸುರುಳಿಗಳನ್ನು ಕಟ್ಟಿಕೊಂಡು ಅವುಗಳ ಮೇಲೆ ಮೊಹರನ್ನೊತ್ತಿ ಅಂಚೆಯ ಮನೆಗೆ ಕಳುಹಿಸಿ ಸುಖವಾಗಿ ಅವರೂ ತೆರಳಿದರು. ಎಲ್ಲರಿಗೂ ಪರೀಕ್ಷೆ ಮುಗಿಯಿತು.

ಆದರೆ........ಆದರೆ........! ಇಬ್ಬರ ಪಾಲಿಗೆ ಇನ್ನೂ ಪರೀಕ್ಷೆ ಮುಗಿದಿರಲಿಲ್ಲ. ಪರೀಕ್ಷೆಯ ಕಟ್ಟಡದಿದಿರಿನಲ್ಲ ಶಿವಣ್ಣ ಚಂದಣ್ಣ ಇಬ್ಬರೂ ಕುಳಿತುಕೊಂಡು ಏನೇನೊ ತಾಳೆ ಹಾಕುತ್ತಲಿದ್ದರು. ತಲೆ ತುರಿಸಿಕೊಳ್ಳುತ್ತ ವಿಚಾರ ಮಾಡಿದರು, ಮಾಡಿಯೆ ಮಾಡಿದರು. ಅಂತೂ ನಿರ್ಧಾರಕ್ಕೊಮ್ಮೆ ಅವರು ಬರಲೇ ಬೇಕಾಯಿತು.

ಚಂದಣ್ಣನ ಉತ್ತರ ತುಂಬ ಸರಿಯಾಗಿದೆ. ಪರೀಕ್ಷೆಯಲ್ಲಿ ಮೇಲ್ತರಗತಿಯಲ್ಲಿ ಬರುವ ಆಸೆಯೂ ಉಂಟು. ಶಿವಣ್ಣನ ಉತ್ತರ ಅಷ್ಟು ಚನ್ನಾಗಿರದಿದ್ದರೂ ಅವನೂ ಪಾಸಾಗುವನು. ಅದರಲ್ಲಿ ಸಂಶಯವೇ ಇಲ್ಲ. ಆದರೆ ವಿಧಿ ಇಂತು ವಂಚಿಸಬೇಕೇ? ಒಂದು ಹಾಸುಗೆಯಲ್ಲಿ ಮಲಗಿದವರು, ಒಂದೆ

ಪುಸ್ತಕ ಓದಿದವರು, ಒಂದೆ ವೇಳೆಗೆ ಸರಿಯಾಗಿ ಓದು ಮುಗಿಸಿ ತಿರುಗಾಡಿದವರು; ಎಲ್ಲ ಉತ್ತರ ಕಾಗದಗಳನ್ನು ಈ ವರೆಗೆ ಒಂದೆ ರೀತಿಯಾಗಿ ಬರೆದವರನ್ನು ಪರೀಕ್ಷೆಯ ಕೊನೆಯ ದಿನವೇ ಎರಡು ಮಾಡಿ ಬಿಡಬೇಕೇ ?

ಪರೀಕ್ಷೆಯ ವಿಚಾರ ಅಷ್ಟಕ್ಕೆ ಮುಗಿಸಿ ಇಬ್ಬರೂ ಅಲ್ಲಿಂದ ಎದ್ದರು. ದಾರಿಯಲ್ಲಿ ಮುಂದಿನ ವಿಚಾರವಾಗಿ ಬಹಳ ಬಹಳ ಮಾತನಾಡಿದರು. ಏಕೋ ಚಂದಣ್ಣನ ಉತ್ಸಾಹಕ್ಕೆ ಶಿವಣ್ಣ ಸರಿಗಟ್ಟುತ್ತಿರಲಿಲ್ಲ. ಆದರೂ ಇಬ್ಬರ ವಿಚಾರಗಳು ಮೇಳಗೂಡುತ್ತಿದ್ದವು. ಅಂದಿನ ಇಡೀ ರಾತ್ರಿ ಕಣ್ಣಿಗೆ ನಿದ್ದೆ ಹಚ್ಚಲಿಲ್ಲ ಅವರು. ಕಾರ್ಯರಂಗದ ಬಲೆಯನ್ನು ದೂರ ಹರಡಿ ಹಿಗ್ಗಿದರು. ನಕ್ಕರು. ಗಂಭೀರವಾದರು.

ಉದಯದಲ್ಲಿ ಚಂದೂ ತನ್ನ ಊರಿಗೆ ಹೊರಟ ಮೋಟರನ್ನೇರಿದ. ಶಿವಣ್ಣ ಅವನನ್ನು ಕಳುಹಿಸುವುದಕ್ಕೆಂದು ಮೋಟರದವರೆಗೆ ಬಂದು ಇನ್ನೂ ಮಾತುಕತೆ ನಡಸಿಯೇ ಇದ್ದನು. ಮೋಟರು ಬಿಡುವವರೆಗೂ ಮಾತನಾಡಿದನು. ಗಾಡಿ ಚಲಿಸಿದಾಗ ಚಂದಣ್ಣ ಗೆಳೆಯನಿಗೆ ತನ್ನ ಊರಿಗೆ ಬರಲು ಎಂದಿನಂತೆಯೇ ಆಮಂತ್ರಣ ಕೊಟ್ಟ. ಗೆಳೆಯ ಮೌನದಿಂದಲೇ 'ಹೂಂ' ಎಂದು ಕೈ ಬೀಸಿದ. ಮೋಟರು ಗಿಡ ಮರಗಳ ನಡುವೆ ಮರೆಯಾಗುವನಕೂ ಚಂದು ಕಿಡಕಿಯ ಹೊರಗಿನಿಂದ ಮೊಗ ಇಣಿಕಿಬಿಟ್ಟು ಗೆಳೆಯನನ್ನು ನೋಡಿಯೆ ನೋಡಿದ.

ಶಿವಣ್ಣ ಕಲ್ಲಿನಂತೆ ನಿಂತಲ್ಲಿಯೆ ನಿಂತು ಬಿಟ್ಟಿದ್ದ.

ಶಿವಣ್ಣನನ್ನು ಊರಿಗೆ ಕರೆದುಕೊಂಡು ಹೋಗುವ ಮೋಟರು ಬರುವುದಕ್ಕೆ ಇನ್ನೂ ಹೊತ್ತಿತ್ತು. ಗೆಳೆಯನಿಂದ ಅಗಲಿದ ಅವನ ಹೃದಯ ಕಲಮಲಗೊಳ್ಳುತ್ತಿತ್ತು. ಅದಕ್ಕಿಂತಲೂ ಬಲವಾದ ಇನ್ನೊಂದು ವೇದನೆ ಅವನನ್ನು ಕೊರೆಯುತ್ತಿತ್ತು. ಅಕೋ, ಅದು ಮುಖದ ಮೇಲೆಯೂ ಎದ್ದು ಕಾಣಿಸುತ್ತದೆ !

ತನ್ನ ಪರೀಕ್ಷೆಯ ಗೆಲವಿನ ಬಗ್ಗೆ ಶಿವಣ್ಣನಿಗೆ ಇನ್ನೂ ಸಂಶಯ ! ಎಂತಲೇ ಅವನು ಮೋಟರು ಹತ್ತಲಿಲ್ಲ. ಊರಿಗೆ ಹೋಗಲಿಲ್ಲ. ತಂದೆ ತಾಯಿಗಳಿಂದ, ಅಣ್ಣತಮ್ಮಂದಿರಿಂದ, ಹಿರಿಕಿರಿಯರಿಂದ ಮುಖ ತಪ್ಪಿಸಿಕೊಂಡು ಹೋಗಬೇಕೆಂದು ಅವನು ನಿಶ್ಚಯ ಮಾಡಿದ. ಚಂದಣ್ಣನ

ಇದಿರಿಗೆ ಅವನು ಅದನ್ನು ಆಡಿ ತೋರಿಸಲಿಲ್ಲ. ಮನೆಯವರಿಗೂ ಬರೆದು ತಿಳುಹಿಸಲಿಲ್ಲ.

ಶಿವಣ್ಣ ಏಕೆ ಬರಲಿಲ್ಲ ಎಂದು ನಾವೆಲ್ಲ ಯೋಚನೆಗೊಳಗಾದೆವು. ಇಂದು ನಾಳೆ ಬಂದಾನೆಂದು ತಾಯಿ ದಿನವೂ ಬಾಗಿಲಲ್ಲಿ ನಿಂತು ನೋಡಿದರು. ಒಂದು ದಿನ ಅಂಚೆಯವನು ಬಂದು ಚಂದಣ್ಣ ಬರೆದ ಕಾಗದ ಕೊಟ್ಟ. ಗೆಳೆಯ ಗೆಳೆಯನನ್ನು ಊರಿಗೆ ಬರಲು ಆಮಂತ್ರಿಸಿದ್ದನು. ಆದರೆ ಶಿವನೆಲ್ಲಿ? ಚಂದಣ್ಣನ ಊರಿಗೆ ಸಮಾಚಾರ ತಿಳಿದುಕೊಂಡು ಬರಲು ಆಳನ್ನು ಕಳುಹಿಸಿದೆವು. ಹೋದವನು ಸುದ್ದಿಯನ್ನು ತಂದ.

ಶಿವನ ಕೊನೆಯ ಉತ್ತರ ಕಾಗದ ಅಷ್ಟು ಸರಿಯಾಗಿ ಆಗಲಿಲ್ಲವಂತೆ. ನಾಲ್ಕು ದಿನಗಳ ಹಿಂದೆ ಯಾರೊ ಅವನನ್ನು ಹಳ್ಳದ ಸೇತುವೆಯ ಕೆಳಗೆ ಕುಳಿತುದನ್ನು ನೋಡಿದರಂತೆ. ಇನ್ನೊಬ್ಬರು ಕೆರೆಯ ದಂಡೆಯ ಮೇಲೆ ಇದ್ದುದನ್ನು ಕಂಡರಂತೆ. ಮತ್ತೊಬ್ಬರು ಕಣಿವೆಯ ಕೊಳ್ಳದಲ್ಲಿಳಿದುದನ್ನು ಕಂಡರಂತೆ. ನಾವು ಗಾಬರಿಯಾಗಿ ಸುತ್ತು ಕಡೆಗೂ ಆಳು ಬಿಟ್ಟೆವು.

ಹೋದ ಆಳು ತಿರುಗಿ ಬರುವಷ್ಟರಲ್ಲಿಯೆ ಪರೀಕ್ಷೆಯ ಪರಿಣಾಮ ಪತ್ರಿಕೆಗಳಲ್ಲಿ ಪ್ರಕಟವಾಗಿತ್ತು. ಹಾಳು ದುರ್ದೈವ! ಶಿವನು ಪಾಸಾಗಿದ್ದ; ಚಂದಣ್ಣ ಆಗಿರಲಿಲ್ಲ.

ಊರು ಊರು ತಿರುಗಿ ತಮ್ಮ ಶಿವ ಮನೆಗೆ ಬಂದ. ತಾಯಿ ಅವನ ಮೈ ಕೈ ಮುಟ್ಟಿ ನೋಡಿದರು. ದೇಹ ಬಡಕಲಾಗಿ ಹೋಗಿತ್ತು. ಕಣ್ಣು ಕುಳಿ ಸೇರಿದ್ದವು. ಆದರೆ ಉತ್ಸಾಹದ ಕಹಕಹದಿಂದ ಅವನು ಕುಣಿಯುತ್ತಿದ್ದುದರಿಂದ ಅಷ್ಟೊಂದು ಬಡಕಲು ದೇಹ ನೋಡಿ ನಾವು ಕೆಡುಕೆನ್ನಿಸಿಕೊಳ್ಳಲಿಲ್ಲ. ತಾಯಿ ಮಾತ್ರ ಕೇಳಲಿಲ್ಲ. ಅವನು ಹಣೆ ಹಣೆ ಗಟ್ಟಿಸಿಕೊಂಡರು. ಹಾಳು ಓದು ಯಾರಿಗೆ ಬೇಕು? ದೇಹಕ್ಕೆ ಸುಖ ಇಲ್ಲದ ಮೇಲೆ ಯಾವ ಮಣ್ಣಿಗೆ ಓದು? ಹೀಗೆ ಏನೇನೊ ಅವರು ಆಡಿಕೊಂಡರು.

ಶಿವಣ್ಣ ಅವರ ಮಾತಿಗೆ ಕಿವಿಗೊಡಲಿಲ್ಲ. ತಾಯಿಯ ಮಾತು ನಮ್ಮ ಕಿವಿಗಳನ್ನಪ್ಪಳಿಸಿದರೂ ಹೃದಯಕ್ಕೆ ಮಾತ್ರ ಮುಟ್ಟಲಿಲ್ಲ. ಹಡೆದ ಕರುಳು ಮಿಡುಕಿದಂತೆ ದಾಯಿಯ ಕರುಳು ನುಡಿದೀತೇ?

ಶಿವಣ್ಣನ ಉತ್ಸಾಹದ ವಸಂತಕಾಲ ಕಳೆಯಿತು. ಅವನ ದೇಹಕ್ಕೆ ಮಾಗಿ ಬಂದಡರಿತು. ದೇಹ ಕುಸಿಯತೊಡಗಿತು. ಮೃತ್ಯುಶಯ್ಯೆಯ ಮೇಲೆ ಮಲಗಿದ ಅವನು ಇನ್ನೂ ಮುಂದಿನ ಕನಸು ಕಟ್ಟುವ ಹವ್ಯಾಸವನ್ನು ಮಾತ್ರ ಬಿಡಲೊಲ್ಲನು.

ಚಂದಣ್ಣನ ಗತಿ ಏನು? ಅಂದು ಪರೀಕ್ಷೆಯ ಕಟ್ಟಡದಿದಿರಿನಲ್ಲಿ ಕುಳಿತು ಇಬ್ಬರೂ ಹರಿಸಿದ ಕಾವ್ಯದ ಒಲಿ ಏನೇನು ಹಿಡಿಯಿತು? ಆ ದಿನ ರಾತ್ರಿ—ಇಬ್ಬರೂ ಪರೀಕ್ಷೆಕೊಟ್ಟು ಬಂದು ಭಾವೀ ಜೀವನದ ಬಗ್ಗೆ ಯೋಚನೆ ಮಾಡಿದ ಆ ರಾತ್ರಿ—ಎಂತೆಂತಹ ನೆನಹುಗಳನ್ನು ಹೊತ್ತಿಸುತ್ತಿದೆಯಲ್ಲ! ಶಿವಣ್ಣ ಯೋಚನೆಯಲ್ಲಿಯೆ ಮಾಡಿ ಮುಳುಗಿದ.

ತಮ್ಮನಿಗೆ ಔಷಧ ಕುಡಿಸಲು ಹತ್ತಿರ ಹೋದಾಗ ಅವನು ಧ್ಯಾನ ಪರವಶನಾದುದನ್ನು ಕಂಡೆ. ಅವನು ಚಿಂತನೆಯ ಚಿರಂತತೆಗೆ ಶರಣು ಹೋಗಿದ್ದ. ಗಿಳಿಯು ಪಂಜರದೊಳಗಿರಲಿಲ್ಲ.

ಚಂದಣ್ಣನ ಬಗ್ಗೆಯೂ ಅದೇ ಸುದ್ದಿ ಕೇಳಿದೆವು. ಅನಿರೀಕ್ಷಿತ ಅಪಜಯ ಅವನನ್ನು ಗೆದ್ದು ಬಿಟ್ಟಿತು. ಪರೀಕ್ಷೆಯ ಪರಿಣಾಮ ಪ್ರಕಟಿಸಿದ ಪತ್ರಿಕೆಯನ್ನು ಕೈಯಲ್ಲಿ ಹಿಡಿದುಕೊಂಡು ಹೋದ ಚಂದಣ್ಣ ಮನೆಗೆ ತಿರುಗಲೇ ಇಲ್ಲ. ಮರದ ರೆಂಬೆಯ ಮೇಲೆ ಕುಳಿತು, ಜೀಗಿ, ಗರಿಗೆದರಿ ಬಾನಿನೆತ್ತರಕ್ಕೆ ಹಾರುತ್ತ ಹೋದ ಅವನ ಆತ್ಮಪಕ್ಷಿ ನಕ್ಷತ್ರಗಳನ್ನು ಮುಟ್ಟಿ ವಿಶ್ವದ ಅನಂತತೆಯಲ್ಲಿ ಅಡಗಿ ಹೋಯಿತು. ಅವರ ಬೆನ್ನು ಹತ್ತಿ ಚಂದಣ್ಣನೂ ಹೋದನಂತೆ!

ಅದನ್ನು ಕೇಳಿ ನಾವು ದಿಙ್ಮೂಢರಾಗಿ ಒಬ್ಬರ ಮುಖ ಒಬ್ಬರು ನೋಡಿದೆವು.

ಒಳ್ಳೆಯ ಗೆಳೆಯರು! ಒಬ್ಬನು ಬಾಳನ್ನು ಸೋಲಿಸಿದ. ಇನ್ನೊಬ್ಬನು ಸಾವನ್ನು ಗೆಲಿದ. ಕೊನೆಯ ಪರೀಕ್ಷೆಗಾಗಿ ಇಬ್ಬರೂ 'ಓ' ಗೊಟ್ಟರು.

---

# ತಾಯಿ ಕಂಡ ಕನಸು

ತಾಯಿ ರೊಟ್ಟಿ ಬಡೆಯುತ್ತಿದ್ದರು. ಅವರ ಬಳಿಯಲ್ಲಿ ಕುಳಿತುಕೊಂಡು ರೊಟ್ಟಿ ತಿನ್ನುತ್ತಿದ್ದೆ. ಬಾಯಿಗೆ ಒಂದು ತುತ್ತು ಇಡುತ್ತ ಆ ಮಾತು ಈ ಮಾತು ಎತ್ತುತ್ತಿದ್ದೆ. ನನ್ನ ಮಾತು ಮುಗಿಯುವನಕೂ ತಾಯಿ ಮೌನ ವಾಗಿಯೇ ಇದ್ದರು. ಅವರೇನೊ ಹೇಳಬೇಕೆಂದು ಮಾಡಿದ್ದರೆಂದು ತೋರಿತು. ಆದರೂ ವಿಚಾರ ಒಳಗೊಳಗೇ ಬೇಗುದಿಗಟ್ಟುಕೊಂಡಿದ್ದವು. ನಾನು ಕೇಳಿಯೆ ಬಿಟ್ಟೆ.

'ಏನದು ತಾಯಿ? ಏನೋ ಹೇಳಬೇಕೆನ್ನುತ್ತೀಯಲ್ಲ?'

'ಏನಿಲ್ಲಪ್ಪ. ನಿನ್ನೆ ರಾತ್ರಿ ಒಂದು ಕನಸು ಬಿದ್ದಿತ್ತು?'

'ಹ್ಞಾಂ ಅದೇ ಸರಿ. ದಿನವೂ ಒಂದು ಕನಸು'

'ಇಲ್ಲಪ್ಪ. ನನ್ನ ಕನಸು ಸುಳ್ಳಾಗುವದಿಲ್ಲ'

'ಸರಿ. ಹೇಗೆ ಸುಳ್ಳಾದೀತು? ನಿಮ್ಮ ಕನಸು ಕೇಳಿದವರಿಗೆಲ್ಲ ಹುಚ್ಚು ಹಿಡಿದು ಬಿಡುವದೇನಿಜ.'

'ಹಾಗೆನ್ನಬೇಡ, ತಮ್ಮ! ನನಗೆ ಕನಸಿನಲ್ಲಿ ನಂಬಿಗೆ ಇದೆ.'

'ಏನದು ಹೇಳಿ ಬಿಡು ಅವ್ವ.'

'ಹೇಳಲೇ ಬೇಡವೊ ಅದನ್ನೆ ಚಿಂತೆ ಮಾಡುತ್ತಿದ್ದೆ. ಆದರೂ ಹೇಳಿಯೆ ಬಿಡುತ್ತೇನೆ. ಕೇಳು. ಕೋಳಿ ಕೂಗಲು ಆಗಲೆ ಸುರುವು ಮಾಡಿದ್ದವು. ಆಳು ಮಗ ಬಂದು ದನ ಕರುಗಳಿಗೆ ಇನ್ನೂ ಮೇವು ಹಾಕಿರಲಿಲ್ಲ. ಆಗೊಂದು ಕನಸು ಬಿತ್ತು. ಆ ಹೊತ್ತಿನಲ್ಲಿ ಬಿದ್ದ ಕನಸು ಎಂದೂ ಹುಸಿ ಹೋಗುವದಿಲ್ಲ.' ತಾಯಿ ಇಷ್ಟನ್ನು ಹೇಳುತ್ತಲೇ ಕಣ್ಣೀರು ಹಾಕ ತೊಡಗಿದರು.

ಆಗ ಉಪ್ಪು ನೀರು ಅಡುಗೆಯೊಡನೆ ಬೆರೆತು ಹೋಯಿತು. 'ಬಾಳುವೆ ಯೆಲ್ಲ ಉಪ್ಪು ನೀರು' ಎಂದು ಒಲೆ ಕೂಗಿತು. ಗಂಟಲಲ್ಲಿದ್ದ ತುತ್ತು ನಂಜಾಗಿ ತೋರಿತು ನನಗೆ. ಸ್ವಲ್ಪ ನೀರು ಕುಡಿದು ತಾಯಿಗೆ ಹೇಳಿದೆ,

‘ ಅದೇನೆ ಇರಲಿ. ಮುಗಿಸಿ ಬಿಡು ತಾಯಿ, ಹೇಳೋದನ್ನು ’ ಈ ನನ್ನ ಮಾತಿಗೆ ಅವರು ಒಪ್ಪಿಕೊಂಡು ಹೇಳತೊಡಗಿದರು.

‘ ಗಂಟೆ ಅಯ್ಯಪ್ಪನೊಬ್ಬ ಬಾಗಿಲಲ್ಲಿ ಬಂದು ಕೂಗಾಡಹತ್ತಿದನು. ಗಂಭೀರವಾಗಿತ್ತು ಅವನ ಮುಖ ಮುದ್ರೆ. ಅವನು ಅಕರಾಳ ವಿಕರಾಳ ವಾಗಿ ತೋರುತ್ತಿದ್ದ. ಎಡಗೈಯಲ್ಲಿ ಕೆಂಪು ಬಟ್ಟೆಯ ಜೋಳಿಗೆ. ಬಲಗೈ ಯಲ್ಲಿ ಅಂಕುಶ. ಹಣೆಯ ಮೇಲೆ ಭಸ್ಮ. ನಡುವೆ ಒಂದು ಚಂದ್ರದ ಬಟ್ಟು. ಗಂಟೆ ಬಾರಿಸುತ್ತ, ಅಂಕುಶವನ್ನು ನೆಲಕ್ಕೆ ಅಪ್ಪಳಿಸುತ್ತ ರೂಪಾಯಿ ಕೊಡುತ್ತೀರೋ ಇಲ್ಲವೆ ಶಾಪ ಕೊಡಲೋ ಎಂದು ಒದರ ಹತ್ತಿದನು. ಅವರ ಹತ್ತಿರ ಚಿಲ್ಲರು ಹಣವಿರಲಿಲ್ಲ. ನನ್ನ ಹತ್ತಿರವೂ ಇರಲಿಲ್ಲ. ‘ ಸ್ವಾಮೀ ಚಿಲ್ಲರಿಲ್ಲ ’ ಎಂದು ಅವರೂ ಹೇಳಿದರು, ನಾನೂ ಹೇಳಿದೆ. ಅವನು ಸಿಕ್ಕಾ ಪಟ್ಟೆ ಚೀರಾಡಿದ. ಕೊಡದಿದ್ದರೆ ಹಾನಿಯಾಗುವಂತೆ ಮಾಡುತ್ತೇನೆ ಎಂದ. ನಾವು ಕೈಕಾಲು ಬಿಟ್ಟೆವು. ‘ ಸ್ವಾಮೀ, ಮತ್ತೇನು ಬೇಕಾದರೆ ಕೇಳಿ. ಕಾಳು ಕೊಡುತ್ತೇವೆ. ಬಿಡಿ ಕಾಸು ಇಲ್ಲ ’ ಎಂದು ಕೇಳಿಕೊಂಡೆವು. ಆತನಿಗೆ ಸೈರಣೆ ಹುಟ್ಟಲಿಲ್ಲ. ಕುಣಿಯ ಹತ್ತಿದ. ’

‘ ಮುಂದೇನು ಆಯಿತು ಹೇಳು ಅವ್ವ ? ’

‘ ಆತ ಕಣ್ಣು ಕೆಂಪಗೆ ಮಾಡಿ ಕೇಳಿದ: ರೂಪಾಯಿ ಕೊಡುವುದಾಗು ವುದಿಲ್ಲವೇ ? ಹೋಗಲಿ. ನಿಮ್ಮ ಹುಡುಗನ ಮೈ ಮೇಲಿನ ಬಟ್ಟೆ ಬಿಚ್ಚಿಸಿ ಕೊಡಿರಿ ಎಂದ. ನಾನು ಅವರಿಗೆ ಕೊಡಕೂಡದೆಂದೆ. ಆದರೂ ಕೇಳಲಿಲ್ಲ. ಶಿವನ ಮೈ ಮೇಲಿನ ಅರಿವೆಗಳನ್ನು ಬಿಡಿಸಿ ಕೊಟ್ಟರು. ಅಯ್ಯಪ್ಪ ನಗುತ್ತ ಹೋದ. ಅರಿವೆ ಕೊಡಬಾರದಪ್ಪ. ಕೊಡಬಾರದು. ಏನು ಆಗು ತ್ತದೆಯೊ... .... ’

‘ ಹೌದೇ, ಕಣ್ಣೀರು ಹಾಕಬೇಡಿರೆಂದು ಎಷ್ಟು ಸಾರೆ ಹೇಳಿಲ್ಲ ? ನನ್ನ ಮೈಯೆಲ್ಲ ತಂಪಾಗಿ ಹೋಗುತ್ತದೆ ಅಳುವುದನ್ನು ಕಂಡು. ’

‘ ಮತ್ತೇನು ಮಾಡಲೆಪ್ಪ. ಇನ್ನೂ ಏನು ಕಾದು ಕುಂತದೊ ! ’

‘ ಏನು ಆಗೋದು ಆಗುತ್ತದೆ. ನಮಗೆ ಬೇರೆ ಕಷ್ಟ ಕಾದು ಕುಂತಿಲ್ಲವಷ್ಟೆ ! ’

ನಾನು ಇಷ್ಟು ಮಾತನಾಡುವಾಗಲೇ ಊರಿಗೆ ಹೋಗಿದ್ದ ತಮ್ಮ ಬಾಗಿಲಲ್ಲಿ ಬಂದು 'ಒಳಗೆ ಯಾರಿದ್ದೀರಿ? ಅವ್ವಾ, ಕಾಲಿಗೆ ನೀರು ತಾ!' ಎಂದು ಕೂಗಿದ. ತಾಯಿ ರೊಟ್ಟಿ ಬಡೆಯುವದನ್ನು ನಿಲ್ಲಿಸಿ ಶಿವನಿಗೆ ನೀರು ಕೊಟ್ಟರು. ನಾನು, ಶಿವನು—ಇಬ್ಬರೂ ತಾಯಿ ಮಾಡಿಕೊಟ್ಟ ರೊಟ್ಟಿಯನ್ನು ತಿಂದು ಅಡುಗೆ ಮನೆಯಿಂದ ಹೊರಬಿದ್ದೆವು. ಆಗ ನನಗೆ ತಾಯಿ ನಿಟ್ಟುಸಿರು ಬಿಟ್ಟುದು ಕೇಳಿತು.

*　　*　　*　　*

ತಾಯಿ ಕನಸು ಕಂಡ ಮೇಲೆ ನಾನು ಮುಂದಿನ ದಿನಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ ಕೆಟ್ಟ ಲಕ್ಷಣಗಳೊಂದೂ ನನಗೆ ತೋರಲಿಲ್ಲ. ಸಂಜೆ ಮುಂಜಾವಿನಲ್ಲಿ ವಾಯು ವಿಹಾರಕ್ಕೆ ಹೊರಟಾಗ ಇದೇ ವಿಚಾರ. ಭಾವಿಕತನದಲ್ಲಿ ನಂಬುಗೆ ಇಡಬೇಕೆ? ಕನಸು ಜೀವನ ವ್ಯಾಪಾರದ ಕ್ರಯ ಪಟ್ಟಿಯೆ? ಈ ವಿಷಯದ ಮೇಲಿದ್ದ ಪುಸ್ತಕಗಳನ್ನು ಕೊಂಡು ಓದಿದೆ. ಕೆಲ ಉತ್ತರಗಳು ನನ್ನ ಪ್ರಶ್ನೆಗೆ ಪರವಾಗಿಯೂ, ವಿರುದ್ಧವಾಗಿಯೂ ತೋರಿದವು.

ಒಂದು ಸಂಜೆ ಈ ವಿಚಾರ ಮಾಡುತ್ತ ಮನೆಗೆ ಬಂದೆ. ಇನ್ನೂ ದೀಪ ಹಚ್ಚಿರಲಿಲ್ಲ. ಮನೆಯಲ್ಲಿ ಕತ್ತಲು ಕವಿದಿತ್ತು. ತಾಯಿಯನ್ನು ಕೂಗಿದೆ. ಉತ್ತರ ಬರಲಿಲ್ಲ. 'ಮನೆಯನ್ನು ಬಿಟ್ಟು ಎಲ್ಲರೂ ಎಲ್ಲಿ ಹೋಗಿದ್ದಾರೋ? ದೀಪವನ್ನು ಹಚ್ಚಬಾರದೆ?' ಹೀಗೆ ನುಡಿದುಕೊಳ್ಳುತ್ತ ಅಡುಗೆಯ ಮನೆಯ ಕಡೆಗೆ ನಡೆದೆ. ಒಲೆಯ ಮುಂದೆ ದೀವಿಗೆಯನ್ನು ಇಟ್ಟುಕೊಂಡು ತಾಯಿ ವಿಚಾರದಲ್ಲಿ ಕರಗಿ ಹೋದುದನ್ನು ಕಂಡೆ! ಆ ಸನ್ನಿವೇಶ ಎದೆಯನ್ನು ಇರಿದಂತಾಯಿತು. ಆಗ ತಾನೆ ಹಸನುಗೊಳಿಸಿದ ನೆಲದ ಮೇಲೆ ರಂಗವಲ್ಲಿ ಹಾಕಿ ತುಂಬ ಕುಂಕುಮ ಹರಡಿದ್ದಾರೆ. ಆ ಕೆಂಪಾದ ನೆಲದ ಮೇಲೆ ಅಕ್ಕಿಯ ಗುಂಪು ಇಟ್ಟಿದ್ದಾರೆ. ಒಂದು ಅಕ್ಕಿಯ ಗುಂಪಿನ ಮೇಲೆ ಬೂದಿ. ಇನ್ನೊಂದರ ಮೇಲೆ ಊದಿನ ಕಡ್ಡಿ. ಇದೇನು ಎನ್ನುತ್ತ ಹೋಗಿ ಅವರ ಮುಂದೆ ನಿಲ್ಲು ವಷ್ಟರಲ್ಲಿ ತಾಯಿ ಹಣೆ ಬಡಿದುಕೊಳ್ಳಹತ್ತಿದರು. 'ನೊಣ ಬೂದಿಯನ್ನು

ಮುಟ್ಟಿತಪ್ಪ. ಶಿವನಿಗೆ ಜ್ವರ ಬಂದಿದೆ. ಉಳಿಯುವುದಿಲ್ಲ. ಅಯ್ಯೋ........ ಶಿವನೆ....... ! ,

' ಛೆ. ಏನು ಬೇಕಾದರೂ ಆಗಲಿ. ನಾನು ಮಾತ್ರ ಇದನ್ನೆಲ್ಲ ನೋಡ ಲಾರೆ ' ಎಂದುಕೊಂಡು ಅಲ್ಲಿಂದ ಹೊರಬಿದ್ದು ಹೊರ ಬಾಗಿಲ ಕಡೆಗೆ ಬಂದೆ. ನನ್ನ ಕಣ್ಣು ನಾನೇ ಮುಟ್ಟಿಕೊಂಡು ನೋಡಿದೆ. ಕಣ್ಣಲ್ಲಿ ಕತ್ತಲು ಕುಣಿಯುತ್ತಿತ್ತು. ಹೊರಗೆ ಬೆಳುದಿಂಗಳು ಹಬ್ಬಿದ್ದರೂ ಕಾರ್ಗತ್ತಲೆಯು ಕುಡಿಯಿಟ್ಟಂತೆ ನನ್ನ ಮನದ ಮೇಲೆ ಪರಿಣಾಮವಾಯಿತು. ' ಶಿವನಿಗೆ ಜ್ವರ ಬಂದಿದೆಯೆಂದು ತಾಯಿ ಹೇಳಿದರಲ್ಲ ! ' ಎಂದು ನನಗೆ ನಾನೆ ನುಡಿದು ಹೊರಗಿನ ಖೋಲಿಯಲ್ಲಿ ಹೋಗಿ ನೋಡಿದೆ. ಖೋಲಿಯ ತುಂಬ ಕತ್ತಲು. ಶಿವನು ಕಣ್ಣಿಗೆ ಕಾಣಿಸಲಿಲ್ಲ ಕಾಲು ಸವರುತ್ತ ಖೋಲಿಯ ತುಂಬ ತಿರುಗಾಡಿದೆ. ಶಿವನು ಕಾಲು ಮುದಚಿಕೊಂಡು ಮಲಗಿದ್ದ. ಮೈ ಮೇಲೆ ಹೊದೆದುಕೊಂಡಿದ್ದ ಶಾಲನ್ನು ಸರಿಸಿ ಮೈ ಮುಟ್ಟಿ ನೋಡಿದೆ. ಅಯ್ಯೋ........ ! ಮೈ ನಿಗಿ ನಿಗಿ ಬೆಂಕಿ !

* * * *

ಶಿವನ ಬೇನೆ ಕಣ್ಣು ಮುಚ್ಚಾಟವಾಡಿಸಿತು. ಒಂದು ದಿನ ಇಳಿ ಹೊತ್ತಿನಲ್ಲಿ ಆತ ಮಲಗಿದ ತಾಣದಲ್ಲಿ ಯಾರೂ ಇಲ್ಲದುದನ್ನು ಕಂಡು ಆತನ ಹತ್ತಿರ ಹೋಗಿ ಮಾತನಾಡಿಸಿದೆ ತಮ್ಮ ತುಂಬಿದ ಹೃದಯದಿಂದ ಮಾತನಾಡಿದ. ' ಶಿವನು ಎಷ್ಟು ನಿಚ್ಚಳವಾಗಿದ್ದಾನಪ್ಪ ' ಎಂದು ನನಗೆ ಆನಂದವಾಯಿತು. ಮರುಕ್ಷಣವೇ ಆತನ ತಲೆಯ ಮೇಲೆ ಕಟ್ಟಿದ್ದ ಒದ್ದೆ ಯಾದ ಅರಿವೆಯನ್ನು ನೋಡಿ ಕಣ್ಣಲ್ಲಿ ನೀರು ಊರಿ ಬಂದಿತು.

ಆಗಲೆ ಊರ ವೈದ್ಯರನ್ನು ಕರೆಯಲು ಹೋದ ಅಪ್ಪ ಖೋಲಿಯಲ್ಲಿ ಬಂದರು. ಕ್ಷಣ ಹೊತ್ತಿನಲ್ಲಿ ಊರ ಜನ ಶಿವನನ್ನು ' ಮಾತನಾಡಿಸ ' ಲಿಕ್ಕೆ ಗುಂಪು ಗುಂಪಾಗಿ ಬರತೊಡಗಿದರು.

' ಈಗ—ಇನ್ನಷ್ಟು ಹೊತ್ತಿಗೆ—ಎಂದು ಕಾಲಹಾಕುತ್ತಿದ್ದಾನೆ ' ಎಲ್ಲರ ಮುಖದಲ್ಲಿಯೂ ಈ ಮಾತು ಎದ್ದು ತೋರುತ್ತಿತ್ತು.

‘ ತಾಯಿ ಎಲ್ಲಿ ಹೋಗಿದ್ದಾಳೆ ? ನೀರು ಬಿಡಲಿ. ಕರೆಯಿರಿ ’ ಎಂದರು ಕೂಡಿದ ಜನ.

ಆ ಹೊತ್ತಿಗೆ ‘ ಅವ್ವಾ....ನೀ....ರು.... ’ ಎಂದು ಶಿವನು ಮೊದಲ ನೆಯ ಉಸಿರು ಎಳೆದನು. ಅದುವೆ ಕೊನೆಯದೂ ಆಯಿತು.

ತಾಯಿಯನ್ನು ಹುಡುಕಲು ನಾನು ಅತ್ತಿತ್ತ ಓಡಾಡಿದೆ. ಮನೆಯಲ್ಲಿ ಕಾಣಲಿಲ್ಲ. ನೇರವಾಗಿ ಅಯ್ಯನವರ ಮನೆಯ ಕಡೆ ಹೋದೆ. ಅಯ್ಯನವರು ಭವಿಷ್ಯದ ಹೊತ್ತಗೆ ಬಿಚ್ಚಿದ್ದಾರೆ. ತಾಯಿ ಇದಿರಿನಲ್ಲಿ ಕಣ್ಣೀರು ಹಾಕುತ್ತ ಕುಳಿತಿದ್ದಾರೆ !

‘ ಶಿವನು ಹೊರಟಿದ್ದಾನೆ. ನೀರು ಬಿಡು ಬಾ ತಾಯಿ ’ ಎಂದು ನಾನು ಉಸಿರನ್ನು ನುಂಗುತ್ತಲೇ ಹೇಳಿದೆ ನಾನು ಈ ಮಾತು ಹೇಳುತ್ತಿರುವಾಗಲೆ ತಾಯಿ ಭವಿಷ್ಯಕ್ಕೆ ಬುದ್ಧೀ ಹೇಳಿದ್ದರು. ಮನೆಯ ಬಾಗಿಲ ನಾನು ಪ್ರವೇಶಿಸುತ್ತಿದ್ದಂತೆಯೆ ತಾಯಿ ಅಳುವುದು ಕೇಳ ಬಂದಿತು.

‘ ಕನಸು ನಿಜವಾಯಿತೇ........ ? ’

---

# ಮಸಣದಿಂದ ಮನೆಗೆ

ತಮ್ಮ ಶಿವ ಓದು ಮುಗಿಸಿಕೊಂಡು ಊರಿಗೆ ತಿರುಗಿ ಬರುವಂದು ಹಾಲು ಮಾರುವ ಹುಡುಗಿ ಚಂದ್ರಾ ಕಣ್ಣೀರು ಹಾಕಿದಳಂತೆ! ಒಂಬತ್ತು ತಿಂಗಳು ದಿನವೂ ಹೊತ್ತಿಗೆ ಸರಿಯಾಗಿ ಬಂದು ಶಿವಗೆ ಹಾಲು ಕೊಡುವು ದೊಂದೆ ಅವಳ ದಿನಗೆಲಸದಲ್ಲಿ ಅತಿ ಮಹತ್ವದ ಸ್ಥಾನವನ್ನು ಆಕ್ರಮಿಸಿ ಕೊಂಡು ಬಿಟ್ಟಿತ್ತು. ಸರಿಯಾಗಿ ಮೂರು ತಾಸು ಹೊತ್ತೇರಿದಾಗ ಖೋಲಿಯ ಬಾಗಿಲಲ್ಲಿ ನಿಂತು 'ಶಿವಣ್ಣ' ಎಂದು ಚಂದ್ರಾ ಕೂಗಿದರೇನೆ ಶಿವನ ನಿತ್ಯದ ಕೆಲಸ ಸುಖವಾಗಿ ಸಾಗುತ್ತಿತ್ತು. ಒಂದು ದಿನ ಚಂದ್ರಾ ವೇಳೆಗೆ ಸರಿಯಾಗಿ ಕೂಗದೆ ಹೋದಳೆ ಅವನ ಓದು ಕುಂಠಿತವಾಗುತ್ತಿತ್ತು. ಅಷ್ಟೊಂದು ಮಮತೆ ಅವರಲ್ಲಿ ಬೆಳೆದು ಬಂದಿತ್ತು.

ಚಂದ್ರಾ ಶಿವಗೆ ಬರೀ ಹಾಲು ಮಾರುವ ಹುಡುಗಿಯಾಗಿರಲಿಲ್ಲ. ಮೊದಮೊದಲು ಒಬ್ಬರೊಬ್ಬರು ಪರಕೀಯರಂತೆ ನಟಿಸಿದರೂ ಬರಬರುತ್ತ ಅವರ ಪರಿಚಯ ಅಕ್ಕ-ತಮ್ಮಂದಿರ ಸಂಬಂಧವನ್ನು ಹಿಡಿದುಕೊಂಡು ಬೆಳೆಯತೊಡಗಿತು. ಬಾನ್-ಬಯಲು, ಜಲ-ನೆಲ ಮೌನದಿಂದ 'ಮಮತೆ' ಎಂಬ ಮಂತ್ರ ಪಠಿಸುತ್ತಿರಬಹುದೇ? ಅಲ್ಲದಿದ್ದರೆ ಜನಮನದಲ್ಲಿ ಈ ಸಂಸ್ಕಾರ ಹೇಗೆ ಬೆಳೆದುಕೊಂಡು ಬಂದೀತು?

ನಾವೆಲ್ಲ ಚಂದ್ರಾನ ಪರಿಚಯ 'ಹೇಳು' 'ಇನ್ನೂ ಹೇಳು' ಎಂದು ಶಿವನನ್ನು ಪೀಡಿಸಿದಾಗ ಮತ್ತೆ ಸ್ವಲ್ಪ ಹೆಚ್ಚಿಗೆ ತಿಳುಹಿಸಿದ. ಇನ್ನಿಲ್ಲದ ಪಾರ್ವತಿಯ ನಿಲವನ್ನೇ ಅವಳು ಹೋಲುತ್ತಾಳೆಂದು ಶಿವನು ತಾಯಿಗೆ ತಿಳುಹಿಸಿದಾಗ ಅವರು ಅವನು ಹೇಳುವುದನ್ನೆಲ್ಲ ಮೈ ಕಿವಿಯಾಗಿ ಕೇಳಿ ದರು. 'ಒಯ್ದವನು ಕೊಡಬಲ್ಲ' ಎಂದುಸುರಿದಳು ತಾಯಿ. ಮೌನ ದಿಂದಲೇ 'ನಿಜವಿರಬೇಕು' ಎಂದೆ ನಾನು.

"ಓ, ಆ ಕೊನೆಯ ದಿನ ನಾನು....ನ್ನು ಬಿಟ್ಟು ಪರೀಕ್ಷೆಗೆಂದು ಹೊರಡುವ ಮುನ್ನಾದಿನ, ಚಂದ್ರಾ ಸಣ್ಣ ಮುಖ ಮಾಡಿಕೊಂಡದ್ದನ್ನು

ಏನು ಹೇಳಲಿ ? '' ಎಂದು ತಮ್ಮನು ದುಃಖದ ನಿಮಿಷವೊಂದನ್ನು ಮಾತ್ರ ಬಿಡಿಸಿ ಹೇಳತೊಡಗಿದ. ನಾವು ' ಹೂಂ ' ಗುಡುತ್ತ ಕೇಳಿದೆವು.

'' ಮುಂಜಾನೆ ಒಂಬತ್ತು ಗಂಟೆಗೆ ಸರಿಯಾಗಿ ಚಂದ್ರಾ ಬರುವ ದಾರಿ ನೋಡಿದೆ. ಒಂಬತ್ತುವರೆ ಗಂಟೆಯಾಯಿತು. ಹತ್ತು ಹೊಡೆಯಿತು. ಹನ್ನೊಂದು ತೀರಿತು. ಸಂಜೆ ಎರಡು ತಾಸು ರಾತ್ರಿ ಮುಗಿವವರೆಗೂ ಚಂದ್ರಾ ಏಕೆ ಬರಲಿಲ್ಲ ಎಂದೆನ್ನುತ್ತಲೆ ಅವಳ ದಾರಿ ನೋಡಿದೆ. ' ಸರಿ. ಹಾಲು ಉಳಿದಿರಲಿಕ್ಕಿಲ್ಲ ' ಎಂದು ಮಧ್ಯೆ ಆಗಾಗ ಅನ್ನುತ್ತಿದ್ದೆ. ' ಛೆ. ಇಂದೆ ಉಳಿದಿರಲಿಕ್ಕಿಲ್ಲವೇ ? ' ಎಂದು ಮತ್ತೆ ಪ್ರಶ್ನೆ ನನ್ನಲ್ಲಿಯೇ ಕೇಳುತ್ತಿದ್ದೆ. ಅವಳು ಬರದ ಕಾರಣ ಬೇಗ ಗೊತ್ತಾಗಲಿಲ್ಲ. ಎಂಟುವರೆ ತಾಸು ಗಡಿಯಾರವಲ್ಲಿ ಬಾರಿಸಿದಾಗ ಒಂದು ವಿಚಾರ ತಟ್ಟನೆ ತಲೆಯಲ್ಲಿ ಸುಳಿಯಿತು. ಹಿಂದಿನ ದಿನ ಮುಂಜಾವಿನಲ್ಲಿ ಚಂದ್ರಾಗೆ ಹೇಳಿದ್ದೆ. ' ನಾಳೆ ಪರೀಕ್ಷೆಗಾಗಿ ಇಲ್ಲಿಂದ ಹೊರಡಬೇಕು. ಮತ್ತೆ ತಿರುಗಿ ಈ ಊರಿಗೆ ಬರುವುದಕ್ಕಾಗುವುದಿಲ್ಲ. ಚಂದ್ರಾ, ನಾಳೆಯೆ ನೀನು ನನಗೆ ಹಾಲು ಕೊಡುವ ಕೊನೆಯ ದಿನ. ಹೊರಡುವ ದಿನ ಕೈ ತುಂಬ ಕೆಲಸ. ಇನ್ನೇನು ಹೆಚ್ಚಿಗೆ ? ಮರೆಯಬೇಡಮ್ಮ ! ' ಎಂದು ಮುಂತಾಗಿ ನಾಲ್ಕು ಮಾತು ತಿಳುಹಿಸಿದ್ದೆ. ಚಂದ್ರಾ ಅದಕ್ಕೇನೆ ತಡ ಮಾಡಿರಬೇಕು. ಅಗಲುವ ದಿನ ಬಂದಿತಲ್ಲ ಎಂದು ವ್ಯಥೆಪಟ್ಟುಕೊಂಡಿರಬೇಕು. ಒಂಬತ್ತು ತಿಂಗಳದ ಸೋದರ ಸಂಬಂಧ. ಮರೆಯುವುದು ದುಸ್ತರವಾಗಿರಬೇಕು ಅವಳಿಗೆ. ಹೀಗೆಯೆ ನಾನೂ ವಿಚಾರ ಮಾಡುತ್ತಲೆ ಇರುವಾಗ ಗೋಡೆಯ ಮೇಲಿನ ಗಡಿಯಾರ ಸರಿಯಾಗಿ ಒಂಬತ್ತು ಗಂಟೆ ಬಾರಿಸಿತು. ಅಷ್ಟರಲ್ಲಿ ಬಾಗಿಲಿಂದ ಯಾರೋ ಕೂಗಿದಂತಾಯಿತು. ಉಕ್ಕಿ ಬಂದ ವಿಚಾರಗಳನ್ನು ಹತ್ತಿಕ್ಕಿ ಬಾಗಿಲವರೆಗೆ ಹೋದೆ. ಹೊಸ್ತಿಲಲ್ಲಿ ತಲೆ ತಗ್ಗಿಸಿಕೊಂಡು, ಕೈಲೊಂದು ಹಾಲಿನ ಪಾತ್ರೆಯನ್ನು ಹಿಡಿದುಕೊಂಡು ಚಂದ್ರಾ ನಿಂತಿದ್ದಳು. ಅವಳಿಗೆ ನಾನು ಬಂದುದು ಗೊತ್ತಿತ್ತು. ಆದರೂ ' ಹಾಲು ಬೇಕೆ ' ಎನ್ನಲಿಲ್ಲ ಅವಳು. ನಾನೇ ಪಾತ್ರೆಯನ್ನು ಮುಂದೆ ಮಾಡಿ ' ಚಂದ್ರಕ್ಕ, ಹಾಲು ' ಎಂದೆ. ಮಾತನಾಡದೆ ತಂದುದನ್ನು ಸುರುವಿದಳು. ಔಪಚಾರಿಕವಾಗಿ ಒಂದೆರಡು ಮಾತನಾಡ ಲೆತ್ನಿಸಿದಳು. ನನಗೆ ಅದೆಲ್ಲ ಗೊತ್ತಾಯಿತು. ಚಂದ್ರಕ್ಕ ಒಮ್ಮೆಲೆ ಮಾತು

ಮುಗಿಸಿ ' ಹೋಗುತ್ತೀಯಾ, ಅಪ್ಪ ' ಎಂದು ಹೇಳಿ ಹಿಂತಿರುಗಿದಳು. ಹಾಗೆಯೆ ತಿರುಗಿ ಹೊರಟವಳು ಮತ್ತೆ ಹಿಂದಿರುಗಿ ನಾಲ್ಕು ಹೆಜ್ಜೆ ಮುಂದಕ್ಕೆ ಬಂದು ' ಶಿವಣ್ಣ ' ಎಂದು ಕೂಗಿದಳು. ನಾನು ನಿಂತಲ್ಲಿಯೇ ನಿಂತಿದ್ದೆ. ಆಗ ಅವಳು ಹೇಳಿದ ಮಾತು ಇನ್ನೂ ಕಿವಿಯಲ್ಲಿದೆ. ' ಶಿವಣ್ಣ, ಚಂದ್ರಾ ನಿನ್ನ ಒಡಹುಟ್ಟಿದವಳೆಂದು ತಿಳಿ. ತಂಗಿಯೊಬ್ಬಳಿದ್ದಳೆಂದು ಹೇಳಿದೆಯಲ್ಲ ! ಅವಳೇ ನಾನೆಂದು ನಂಬು. ಮನೆಯವರಿಗೆಲ್ಲ ನನ್ನ ಪರಿಚಯ ಮಾಡಿಕೊಡು. ಎಲ್ಲಿಯಾದರೂ ಕಂಡಾಗ ಹಾಗೆಯೆ ಹೋಗಬೇಡ. ನಿಂತು ಒಂದೆರಡು ಮಾತನಾಡು. ಅದನ್ನೆ ಭಾಗ್ಯವೆಂದು ಭಾವಿಸಿ ಈ ಅಗಲುವಿಕೆಯನ್ನು ಮರೆಯುತ್ತೇನೆ. ಹೋಗಿ ಬಾಪ್ಪ. ಚಂದ್ರಾ ಮನೆಯವಳೆಂದು ತಿಳಿ ' ಎಂದು ಹೇಳುತ್ತಲೆ ಒಮ್ಮೆಲೆ ತಿರುಗಿ ಹಿಂದಕ್ಕೆ ನೋಡದೆ ಹೊರಟು ಹೋದಳು. ನಾನೂ ತಿರುಗಿ ಅವಳನ್ನು ನೋಡಲಿಲ್ಲ. ಎಂತಹ ನೋವದು !

" ಹಾ. ಒಮ್ಮೆ ಚಂದ್ರಾನನ್ನು ನಮ್ಮ ಮನೆಗೆ ಕರೆದುಕೊಂಡು ಬರುವುದೇ ಸರಿ. ನಮ್ಮ ಊರು, ನಮ್ಮ ಮನೆ, ನಮ್ಮ ಹೊಲ ಎಲ್ಲಾ ಅವಳಿಗೆ ಪರಿಚಯ ಮಾಡಿಕೊಡಬೇಕು "

ಶಿವ ಇಂತು ಉದ್ವೇಗದಿಂದ ಮಾತನಾಡುತ್ತಿರುವುದನ್ನು ನಾವೆಲ್ಲ ಕಿವಿ ತುಂಬ ಕೇಳಿದೆವು. ಅಂದು ಮನೆಗೆ ಹತ್ತಿರದವಳೊಬ್ಬಳು ಬಂದು ಸೇರಿದಂತಾಯಿತು. ಚಂದ್ರಾನನ್ನು ಎಲ್ಲರಿಗೂ ನೋಡುವ ಕುತೂಹಲ. ಕಾಣದ ಚಂದ್ರಾ ಅಷ್ಟೊಂದು ಮಮತೆಯ ಮೂರ್ತಿಯಾಗಿ ತೋರಿದಳು. ಹೋದ ಪಾರ್ವತಿ ಮನೆಗೆ ಮರಳಿದಳೆಂದು ಅಂದು ತಾಯಿ ಅದೆಷ್ಟು ಬಾರಿ ಅಂದರಲ್ಲ !

*  *  *  *

ಚಂದ್ರಾನ ಪರಿಚಯ ಮೇಲಿನಂತೆ ಆದ ಮೇಲೆ ಕೆಲ ದಿನ ಉರುಳಿದವು.

ಅದೊಂದು ದಿನ ಮನೆಯ ಕಟ್ಟೆಯ ಮೇಲೆ ಮಧ್ಯಾಹ್ನದ ಊಟ ಮುಗಿಸಿಕೊಂಡು ನಾವೆಲ್ಲ ಮಾತು ಕತೆಯಾಡುತ್ತ ಕುಳಿತಿದ್ದೆವು. ತಾಯಿ

ಹೌರಾಗಿ ಚಂದ್ರಾನ ಸುದ್ದಿಯನ್ನೆತ್ತಿದರು. ‘ ಹೌದು. ಇತ್ತೀಚೆಗೆ ಅವಳ ಸುದ್ದಿ ಏನೂ ತಿಳಿಯಲಿಲ್ಲವಲ್ಲ ! ’ ಎಂದೆ ನಾನು.

ಅಷ್ಟೊತ್ತಿಗೆ ಒಳಗಿನಿಂದ ಹಾಲು ಸುಟ್ಟ ವಾಸನೆ ಬಂದಿತು. ತಾಯಿ ಬೇಗನೆ ಎದ್ದು ಒಳಗೆ ಹೋಗಿ ಬೆಂಕಿಯನ್ನು ನಂದಿಸಿದರು. ಹಾಲು ಉಕ್ಕಿತಂತೆ !

ಒಳಗೆ ಸರಿಯಾದ ವ್ಯವಸ್ಥೆಯನ್ನು ಮಾಡಿ ತಾಯಿ ಮತ್ತೆ ನಮ್ಮೊಡನೆ ಬಂದು ಕುಳಿತರು. ಆಗಲೆ ಜವಾನನೊಬ್ಬ ಬಂದು ಲಕ್ಕೋಟೆಯೊಂದನ್ನು ನನ್ನ ಕೈಗಿತ್ತ. ಬಿಚ್ಚಿದೆ. ಓದಿದೆ. ಕಣ್ಣುಗಳು ಅರಳಿದವು. ಹೃದಯ ಹಿಗ್ಗಿತು. ಉಕ್ಕಿಬಂದ ಆನಂದವನ್ನು ತಡೆಯುವುದಾಗಲಿಲ್ಲ. ‘ ಹೋ ’ ಎಂದು ಬಿಟ್ಟೆ. ‘ ಏನದು ? ’ ಎಂದರು ತಾಯಿ. ‘ ಅದೇನು ಸಂತೋಷವೋ!’ ಎಂದು ಶಿವ ಕುತೂಹಲಿಯಾದ. ‘ ಏನು ಹೇಳಬಾರದೇನೊ ? ’ ಎಂದು ಅಪ್ಪ ಸಾವಧಾನವಾಗಿ ಕೇಳಿದರು. ‘ ಇಷ್ಟು ಬೇಗ ಹೇಳಿ ಬಿಡಲೇ ? ’ ಎನ್ನುವಂತಹ ವಿಚಿತ್ರ ಅನುಭವ ನನಗಾಯಿತು. ಈಗಿಲ್ಲ, ಇನ್ನಷ್ಟು ಹೊತ್ತಿಗಾದರೂ ಹೇಳಬೇಕಾದುದೇ ಎಂದುಕೊಂಡು ಜವಾನ ತಂದ ಸುದ್ದಿ ಹೇಳಿದೆ.

“ಚಂದ್ರಕ್ಕನನ್ನು ಹಿರೇಮಲ್ಲೂರಿನಿಂದ ಮೂರು ಮೈಲಿಗಳಾಚೆಗಿರುವ ....ಕ್ಕೆ ಕೊಟ್ಟಿದೆ. ಮದುವೆ ಇನ್ನೊಂದು ತಿಂಗಳಿಗೆ—ತುಲಸಿಯ ಲಗ್ನದ ಸುಮುಹೂರ್ತದಲ್ಲಿ ” ಇಂತು ಸಂಕ್ಷಿಪ್ತವಾಗಿ ಸುದ್ದಿಯನ್ನು ಹೇಳಿ ಆಮಂತ್ರಣ ಪತ್ರಿಕೆಯನ್ನು ಎಲ್ಲರ ಮುಂದಿಟ್ಟೆ. ಒಬ್ಬೊಬ್ಬರೇ ಓದಿ ಸುಖಿಸಿದರು.

ಮಂಗಲ ಸುದ್ದಿಯನ್ನು ತಂದ ಜವಾನನಿಗೆ ಊಟ ಮಾಡಿಸಿಯಾಯಿತು. ಅವನಿಗೆ ಎಡೆ ಮಾಡುವಾಗ ತಾಯಿ ಏನೇನೊ ಪ್ರಶ್ನೆ ಮಾಡುತ್ತಿದ್ದರು. ಹೊರಗಿನಿಂದಲೆ ನಾನು ಅದನ್ನೆಲ್ಲ ಕೇಳುತ್ತ ಮೌನದಿಂದ ನಗುತ್ತಿದ್ದೆ. ಕೊನೆಗೊಮ್ಮೆ ಜವಾನ ಊಟ ಮುಗಿಸಿ ಹೊರಗೆ ಬಂದ. ಎಲೆ ಅಡಿಕೆ ಕೊಟ್ಟಾಯಿತು. ಮುಂದೆ ಕೆಲ ಹೊತ್ತಿನ ಮೇಲೆ “ಅಪ್ಪನೆ ಕೊಡಿ

ಅಪ್ಪ. ಮುಂದಿನ ಊರಿಗೆ ಹೋಗಬೇಕು. ಚಂದ್ರಕ್ಕ, ಅವರ ತಂದೆ ತಾಯಿ ನಿಮಗೆಲ್ಲ ಬಾಯೆಂದು ಹೇಳಿದ್ದಾರೆ. " ಎಂದು ಹೇಳಿದ. ಒಬ್ಬೊಬ್ಬರೆ 'ಹೂಂ' ಎಂದೆವು. ಜವಾನನು ಚಂದ್ರಕ್ಕನಿಗೆ ನಾವು ಬರುವೆವೆಂಬ ಸುದ್ದಿಯನ್ನು ತಿಳುಹಿಸಲು ಹೊರಟು ಹೋದ.

ಚಂದ್ರಕ್ಕನ ಮದುವೆ ಸರಿಯಾಗಿ ಒಂದು ವಾರ ಉಳಿಯಿತು. ಅವಳ ಮದುವೆಗೆ ಯಾರು ಹೋಗುವುದು ಎಂಬ ವಿಚಾರಕ್ಕಿಟ್ಟುಕೊಂಡಿತು. ತಾಯಿಗೆ ಮನೆಯ ಆಡಳಿತವನ್ನೆಲ್ಲ ಬಿಟ್ಟು ಹೋಗಲು ಒಂದಿನಿತು ಅನನುಕೂಲ. ಅಪ್ಪನಿಗೆ ಶಾಲೆಯ ಕೆಲಸ. ಓದು ಮುಂದುವರಿಸುವ ಕೆಲಸ ನನಗೂ ಉಂಟು. ಹೀಗಾಗಿ ಎಲ್ಲರೂ ಮತಗಳನ್ನು ಶಿವನಿಗೇ ಕೊಟ್ಟೆವು. ಚಂದ್ರಕ್ಕನ ಮದುವೆಗೆ ಶಿವನು ಹೋಗಬೇಕೆಂಬ ಠರಾವು ಸರ್ವಾನು ಮತದಿಂದ ಪಾಸಾಯಿತು.

ಸೋಮವಾರ ಮುಂಜಾವಿನಲ್ಲಿ ಚಂದ್ರಕ್ಕನಿಗಾಗಿ ಉಡುಗೊರೆಯನ್ನು ಹಿರಿಯರ ಹರಕೆಗಳನ್ನು ಹೊತ್ತುಕೊಂಡು ಶಿವನು ಕೆಂಪೇರಿಯನ್ನೇರಿ ಮದುವೆಯ ನಿಬ್ಬಣಿಗರ ಗುಂಪನ್ನು ಕೂಡಿಕೊಂಡನು.

ಚಂದ್ರಕ್ಕನಿಗೆ ಮದುವೆಯ ಕಾರ್ಯಕಲಾಪಗಳಲ್ಲಿ ಶಿವನನ್ನು ಆಗಲೆ ಕಾಣುವುದಕ್ಕಾಗಲಿಲ್ಲವಂತೆ. ಗೋಧೂಳಿಯ ಮಂಗಲ ಸಮಯಕ್ಕೆ ಸರಿಯಾಗಿ ಅಕ್ಷತಾಕಾರ್ಯ ನಡೆಯಿತಂತೆ. ಉಡುಗೊರೆಯ ಸಮಾರಂಭ ನಡೆದಾಗ ಶಿವನು ಎದ್ದು ನಿಂತು ' ಚಂದ್ರಕ್ಕನಿಗೆ ' ಎಂದು ಹೆಸರು ಹೇಳಿ ಉಡುಗೊರೆಯನ್ನಿತ್ತಾಗ ಬೀಗರು ' ಯಾರು ? ' ' ಯಾರು ? ' ಎಂದರಂತೆ. ಚಂದ್ರಕ್ಕನ ಹಡೆದವರು ' ಮನೆಯ ಮಗ ' ಎಂದರಂತೆ. ಚಂದ್ರಕ್ಕ ' ಒಡ ಹುಟ್ಟಿದವ ' ಎಂದಳಂತೆ !

ತುಂಬಿದ ಹೃದಯದೊಂದಿಗೆ ಶಿವ ಮದುವೆ ಮುಗಿಸಿ ಬಂದು ನಮಗೆಲ್ಲ ಹಗಲು ರಾತ್ರಿ ನಿಬ್ಬಣದ ಕಾರ್ಯಕಲಾಪಗಳನ್ನು ಹೇಳಿಯೆ ಹೇಳಿದ; ನಾವು ಕೇಳಿಯೆ ಕೇಳಿದೆವು.

*  *  *  *

ಸುಖದ ದಿನ ಎಷ್ಟು ಸಾರೆ ಒಂದರ ಮೇಲೊಂದು ಬಂದಾವು ?

ಚಂದ್ರಕ್ಕನ ಮದುವೆ ಮುಗಿಸಿ ಬಂದ ಕೆಲ ದಿನಗಳ ಮೇಲೆ ಶಿವನಿಗೆ ಬೇನೆ ಬಂದಡರಿತು. ದಿನಕೊಂದು ಚಂದಾಗಿ ರೋಗ ಹಿಂಜರಿಯುವ ಚಿಹ್ನೆ ತೋರಲಿಲ್ಲ. ಯಾವ ವೈದ್ಯಕ್ಕೂ ಆತನ ಕಾಹಿಲೆ ಕಡಿಮೆಯಾಗುವಂತೆ ಕಾಣಲಿಲ್ಲ. ಯತ್ನಕ್ಕೆ ಮಾತ್ರ ಕೊರತೆ ಮಾಡಗೊಡಲಿಲ್ಲ ನಾವು. ವಿಧಿಯ ಆಸರೆ ಇಲ್ಲದ ಮೇಲೆ ನಮ್ಮ ಹೋರಾಟ ಯಾವ ಮಣ್ಣಿಗೆ ?

' ಚಂದ್ರಕ್ಕನನ್ನು ಕರೆಸಿರಿ. ನೋಡುವ ಹಾಗಾಗಿದೆ ' ಎಂದು ಶಿವ ಒಮ್ಮೆ ಬೇನೆಯ ಹಾಸುಗೆಯಿಂದ ನುಡಿದ ಮಾತು ನನ್ನ ನೆನಹಿನ ಭಿತ್ತಿಯ ಮೇಲೆ ಅಚ್ಚಳಿಯದೆ ಇನ್ನೂ ಮೂಡಿದೆ. ಅವನ ಆಸೆಯನ್ನು ನಾವು ಆಗಲೆ ತೀರಿಸಬಹುದಾಗಿತ್ತು. ಆದರೆ ಅವಲಕ್ಷಣ ನಂಬಿ ಅಂಗೈ ಕೊಡದೆ ಹೋದೆವು. ಹೌದು. ಸಂಕಟಕಾಲದಲ್ಲಿ ಬುದ್ಧಿ ಮಂದವಾಗುತ್ತದೆ. ಆಗ ಸರಿಯಾದ ದಾರಿ ತೋರುವುದಿಲ್ಲ. ಏನು ಮಾಡುವುದು ?

ಶಿವನು ತೀರಿಕೊಂಡ ಸುದ್ದಿಯನ್ನು ಎಲ್ಲರಿಗೂ ಹೇಳಿ ಕಳುಹಿಸಿದೆವು. ತಾಯಿಯ ಬಲವತ್ತರದ ಅಪೇಕ್ಷೆಯಂತೆ ಚಂದ್ರಕ್ಕನಿಗೂ ಕಳುಹಿಸಿದೆವು. ಆಗ ತವರೂರಿನಲ್ಲಿ ಒಂಬತ್ತು ತಿಂಗಳ ಬಸಿರು ಹೊತ್ತ ತಾಯಿಯಾಗಿದ್ದಳು ಚಂದ್ರಾ. ಇಂದೊ ನಾಳೆಯೊ ಹೆರಿಗೆಯ ಕಾಲವನ್ನು ಮನೆಯವರು ನೋಡುತ್ತಾರೆಂಬ ಸುದ್ದಿಯನ್ನು ಜವಾನನು ತಂದನು.

ಚಂದ್ರಕ್ಕನ ಪ್ರಸವ ಮೂಹೂರ್ತವನ್ನು ಅರಿಯದೆ ಸುದ್ದಿ ಕಳುಹಿಸಿ ಎಂತಹ ತಪ್ಪು ಮಾಡಿದೆವಲ್ಲ ಎಂದು ನಮಗನ್ನಿಸಿತು. ಚಂದ್ರಕ್ಕ ಏನು ಹೇಳಿದಳೆಂದು ಜವಾನನನ್ನು ಕೇಳಿದಾಗ ಆತ ಏನೂ ತಿಳಿಸಲಿಲ್ಲ. ಅವಳಿಗೆ ಎಷ್ಟು ವೇದನೆಯಾಗಿರಬೇಡ ! ಊಹೆಗೆ ರೆಕ್ಕೆ ಕಟ್ಟಿ ಚಂದ್ರಕ್ಕನ ದುಃಖ ವನ್ನು ನಾನೇ ನೋಡಿ ಬಂದೆ. ಅದೊಂದು ಘೋರ ಪ್ರಸಂಗ ! ಚಂದ್ರಕ್ಕ ನಿಗೆ ಪರೀಕ್ಷಾಕಾಲ ! ಆದರೂ ದೇವ ಕಾಯ್ದನೆನ್ನಬೇಕು !

ಶಿವ ಮನೆ ಬಿಟ್ಟು ಹೋದ ಮೂರು ದಿನಗಳಲ್ಲಿಯೆ ಚಂದ್ರಕ್ಕ ಗಂಡು ಮಗುವನ್ನು ಸುಖಕರವಾಗಿ ಹೆತ್ತಳೆಂಬ ಸಂತಸ್ತದ ವಾರ್ತೆಯೊಂದು ಮನೆಗೆ ಬಂದಿತು.

ಮಗುವಿನ ನಾಮಕರಣ ಹದಿಮೂರನೆಯ ದಿನ. ಹದಿನಾಲ್ಕನೆಯ ದಿನ ಚಂದ್ರಕ್ಕ ತವರೂರಿನಿಂದ ಆಳುಮಗನನ್ನು ಕೊಟ್ಟು ನಮಗೆಲ್ಲ ಸಂದೇಶ ಕಳುಹಿಸಿದಳು.

"ಮಗುವಿನ ಹೆಸರು ಶಿವನೆಂದು ಇಟ್ಟಿದ್ದೇವೆ. ರೂಪ ಎಲ್ಲಾ ಇಸ್ನಿಲ್ಲದ ಶಿವನದು. ಹೊಸ ಮಗುವಿನ ಹುಟ್ಟನ್ನು ನೆನೆದು ಹೋದವನನ್ನು ಮರೆಯಬೇಕು."

ಚಂದ್ರಾನ ಸಂದೇಶ ನಾವೆಲ್ಲ ಓದಿ ಕಣ್ಣೊರಸಿಕೊಂಡೆವು. ಹೋದ ತಮ್ಮ ತಿರುಗಿ ಬಂದ ಎಂದೆವು. ಮಸಣದಿಂದ ಮನೆಗೆ ಮರಳಿದನೆಂದು ನಂಬಿದೆವು.

ಅಷ್ಟೊತ್ತಿಗೆ ಮತ್ತೆ ಹಾಲು ಉಕ್ಕಿತು !

---

# ಬಹುಮಾನ

**ಓಲೆ....೧** ಒರೇಮುಲ್ಲೂರು.

ತಮ್ಮ ಶಿವನಿಗೆ,

ನಿನ್ನೆ ರಾತ್ರಿ ಬ್ರೌನ್ ಎಂಬ ಹೆಸರಿನ ಆಂಗ್ಲ ಲೇಖಕನು ಅನುವಾದಿಸಿದ ಫಿರ್ದೌಸಿ ಕವಿಯ ವ್ಯಂಗ್ಯ ಕವನವೊಂದನ್ನು ಓದುತ್ತ ಮಲಗಿಕೊಂಡೆ. ಹಾಗೆಯೆ ಕನಸೊಂದನ್ನು ಕಂಡೆ. ಚಿತ್ರವಿಚಿತ್ರವಾದ ಕನಸು. ಏನು, ಹೇಳಲೇ ಬೇಕೇ ?

ಫಿರ್ದೌಸಿ ಮತ್ತು ನೀನು ಇಬ್ಬರೂ ಅಚ್ಚುಮೆಚ್ಚಿನ ಗೆಳೆಯರಾಗಿದ್ದುದನ್ನು ಕಂಡೆ. ನನಗೆ ಬಹು ಸಂತೋಷವಾಯಿತು. ಪರ್ಸಿಯಾ ದೇಶದ ಸಾಹಿತ್ಯ ಪ್ರಪಂಚಕ್ಕೆ ಧ್ರುವ ತಾರೆಯಂತೆ ಕಂಗೊಳಿಸುವ ಫಿರ್ದೌಸಿ ನಿನಗೆ ಗೆಳೆಯನಾದುದನ್ನು ಕಂಡು ನನಗೆ ಎಷ್ಟು ಆನಂದವಾಗಿರಬೇಡ ? ಊಹಿಸು. ಭಾವನಾ ಪ್ರಪಂಚದ ಎಲ್ಲೆಯನ್ನು ಮುಟ್ಟಿ, ಅಪ್ಪಳಿಸಿ ಪ್ರತಿಧ್ವನಿ ತಿರುಗಿ ಬರುವವರೆಗೂ ಊಹಿಸು. ನಿಮ್ಮಿಬ್ಬರ ವಿದ್ವತ್ತನ್ನು ಕಂಡು ಘಜನಿಯ ಮಹಮ್ಮದನು ಕರೆಯಿಸಿಕೊಂಡನು. ಸ್ವತಃ ಅರಸನೇ ನಿರಕ್ಷರಿಯಾಗಿದ್ದರೇನಾಯಿತು ? ಅವನಂತಹ ರಸಿಕನನ್ನು ಈ ಜಗತ್ತು ಪಡೆಯುವುದು ವಿರಳ. ಕಲಾಪ್ರಿಯನಾದ ಮಹಮ್ಮದನು ಪೂರ್ವದಲ್ಲಿ ಪ್ರಖ್ಯಾತರಾದ ಮಹಾ ವಿದ್ವನ್ಮಣಿಗಳನ್ನೆಲ್ಲ ತನ್ನಲ್ಲಿಗೆ ಬರಮಾಡಿಕೊಂಡು ಆಸ್ಥಾನದಲ್ಲಿರಿಸಿಕೊಂಡು ಗೌರವವನ್ನಿತ್ತು ಕೊನೆಯವರೆಗೂ ಅವರಿಗೆ ಪೋಷಕನಾದನು. ನಿಮಗೂ ಅದೇ ಸನ್ಮಾನವನ್ನು ಸಲ್ಲಿಸಲೆಂದೇ ಔತಣ ಕೊಟ್ಟು ದರ್ಬಾರಕ್ಕೆ ಬರಲು ಹೇಳಿ ಕಳುಹಿಸಿದನು.

ನೀವಿಬ್ಬರೂ ಮಹಮ್ಮದನಲ್ಲಿಗೆ ಹೊರಟಿರಿ. ಸುಲ್ತಾನನ ಮನ್ನಣೆಗೆ ನೀವು 'ಓ' ಗೊಟ್ಟಿರಲಿಲ್ಲ. ರಸಿಕ ಗೆಳೆಯನ ಆತಿಥ್ಯಕ್ಕೆ ಮಾತ್ರ ಒಪ್ಪಿಕೊಂಡಿದ್ದಿರಿ. ಹೌದು. ಕಲಾ ಕೋವಿದನಿಗೆ ಯಾರ ಹಂಗೇನು ? ಕೋಗಿಲದ ಗಾನಕ್ಕೆ ಯಾರ ಬಹುಮಾನವೇನು ? ಕಿರೀಟ ಸಿಂಹಾಸನಗಳು ತಮ್ಮ

ತಾಣದಿಂವಗಲಿ ಮಣ್ಣುಗೂಡಿ ಹೋಗಬಹುದು. ಅರಸ, ಸರ್ವಾಧಿಕಾರಿ, ಸುಲ್ತಾನ, ದಿವಾನರೆಂದೆಂಬುವವರ ಗೋರಿಯ ಮೇಲೆ ಕತ್ತೆ ನಾಯಿಗಳು ಸ್ವಚ್ಛಂದವಾಗಿ ತಿರುಗಾಡಬಹುದು. ಆದರೆ ವಾಣಿಯ ವರದ ಹಸ್ತದ ನೆರಳಿನಲ್ಲಿ ಬೆಳೆದು ಕಾಲಗರ್ಭದಲ್ಲಿ ಅಡಗಿದ ಕುವರನನ್ನು ಪ್ರಪಂಚ ಎಂದೆಂದಿಗೂ ಮರೆಯಲಾರದು. ಅವನ ಗೋರಿಯ ಮೇಲೆ ತರು ಮರಾದಿಗಳು ನೆರಳು ಚಾಚುವವು. ಮಲ್ಲಿಗೆ ಕಾವಣ ಕಟ್ಟುವುದು. ತಂಗಾಳಿ ತಂಪೆರಚುವದು. ಹಕ್ಕಿ ಹಾಡುವವು. ಜಗವೆಲ್ಲ ಆಗ ಸರಸ್ವತಿಯ ಸತ್ಪುತ್ರನ್ನು ನೆನೆಯುವುದು; ನೆನೆದು ಬಾಳಬಟ್ಟೆಯ ಪರಮಾಗಮವನ್ನು ಕಂಡುಕೊಂಡು ಬದುಕುವುದು. ಇದೇ ರೀತಿಯಾಗಿ ನೀವು ವಿಚಾರ ಮಾಡುತ್ತ ಘಜನಿಯ ಮಹಮ್ಮೂದನ ಭವ್ಯ ಸುಂದರವಾದ ಓಲಗಕ್ಕೆ ಬಂದಿರಿ ದ್ವಾರ ಪಾಲಕರು, ಭಟ್ಟಂಗಿಗಳು ಉಚ್ಚ ಕಂಠದಲ್ಲಿ ನಿಮ್ಮ ಗುಣಗಾನ ಮಾಡಿ ಅರಸನಲ್ಲಿಗೆ ಕರೆದೊಯ್ದರು.

ಆಸ್ಥಾನದಲ್ಲಿ ನೀವು ಕಂಡುದೇನು? ಗಣಿತ ಶಾಸ್ತ್ರಜ್ಞ, ಸಂಸ್ಕೃತ ಪಂಡಿತ ಅಲ್-ಬೆರೂನಿ, ಇತಿಹಾಸಕಾರ ಉತ್‌ಬಿ, ತತ್ತ್ವವೇತ್ತರಾದ ಪರೇಬಿ, ಬೈಹಾಕಿ ಮುಂತಾದ ಮಹಾಜ್ಞಾನದರ್ಶಿಗಳು ಅಲ್ಲಿ ಕುಳಿತಿದ್ದರು. ಅವರೆಲ್ಲ ನಿಮ್ಮ ಆಗಮನವನ್ನು ಸಂತೋಷದಿಂದ ಕೋರಿದರು. ಆಸ್ಥಾನ ಕವಿಗಳಾದ ಉನ್-ಸೂರಿ, ಅಸ್-ಜಾದಿಗಳೂ ಅಲ್ಲಿದ್ದರು. ನಿಮ್ಮ ಬರವನ್ನು ಸ್ವತಃ ಮಹಮ್ಮೂದನೇ ಸಿಂಹಾಸನದಿಂದ ಇಳಿದು ಬಂದು ಕೋರಿದಾಗ ನನ್ನ ಮೈಯೆಲ್ಲ ಜುಮ್ಮೆಂದಿತು. ಫಿರ್ದೌಶಿಯೂ ಸಾಮಾನ್ಯನಲ್ಲ. ನೀನೂ ಸಾಮಾನ್ಯನಲ್ಲ. ಅತಿಥಿಗಳಾಗಿ ಬಂದ ನಿಮ್ಮನ್ನು ಸಂತೃಪ್ತಿಗೊಳಿಸಲೆಂದು ಸಂಗೀತ ಕಛೇರಿ ನಡೆಯಿತು. ಕಾವ್ಯಗಾಯನ ಸಾಗಿತು. ಏನು ಸಂತಸವಪ್ಪ ಆ ಜಾವ!

ಸರಿ. ಮುಂದೇನಾಯಿತು ಎನ್ನುತ್ತೀಯಾ? ಕುಡಿತ, ಊಟ ಮೊದಲಾದವು ಮುಗಿದಾಗ ಮಹಮ್ಮೂದನು ಹೌರಾಗಿ ಮಾತೆತ್ತಿದನು. 'ನನ್ನ ಜೀವನ ಚರಿತ್ರೆಯ ಹಾಸಿನಲ್ಲಿ ಪ್ರತಿಭೆಯ ಹೊಕ್ಕನ್ನು ಸೇರಿಸಿ ಅಮರ ಕಾವ್ಯಮಡಿಯೊಂದನ್ನು ನೇಯ್ದು ಕೊಟ್ಟರೆ ಅರವತ್ತು ಸಾವಿರ ಭಂಗಾರದ ನಾಣ್ಯಗಳನ್ನು ಬಹುಮಾನವಾಗಿ ಕೊಟ್ಟು ಸನ್ಮಾನ ಮಾಡುತ್ತೇನೆ. ನೀವಿಬ್ಬರೂ ಈ ಕಾರ್ಯ ನಡಸಿಕೊತ್ತೀರೆಂದು ನಂಬುತ್ತೇನೆ!' ಮಹಮ್ಮೂದನ

ಈ ಮಾತಿಗೆ ನೀವು ಒಡಂಬಟ್ಟಿರಿ. ಆತ ಕೊಡುವೆನೆಂದ ಹಮ್ಮಿಣಿಗೆ ಮಾತ್ರ ಮರುಳಾಗಿರಲಿಲ್ಲ ನೀವು. ಆತನ ಕಲಾ ಪ್ರೇಮಕ್ಕೆ ಮೆಚ್ಚಿ ಸಮ್ಮತಿ ಕೊಟ್ಟಿರಿ. ನಾನದನ್ನು ಅರಿತುಕೊಂಡೆ.

ನಾಣ್ಯದ ಎರಡು ಮುಖಗಳಂತೆ ಇದ್ದುಕೊಂಡು ನೀವಿಬ್ಬರೂ ಕಾವ್ಯ ಬಿತ್ತರಿಸುವುದಕ್ಕೆ ಪ್ರಾರಂಭ ಮಾಡಿದಿರಿ. ವೀಣೆ, ವೈಣಿಕರ ಪಾತ್ರ ವಹಿಸಿ 'ಶಹಾನಾಮಾ' ಗ್ರಂಥವನ್ನು 'ಹಾ' 'ಹಾ' ಎನ್ನುವುದರೊಳಗಾಗಿ ರಚಿಸಿ ಮಹಮ್ಮೂದನ ಸಾವ ಕೆಡುವ ದೇಹಕ್ಕೆ ಅಮರತೆಯನ್ನು ತಂದು ಕೊಟ್ಟಿರಿ ನೀವು. ಪೂರ್ತಿಯಾಗಿ ಮುಗಿದ ಆ ಮಹಾ ಕಾವ್ಯವನ್ನು ಘಜನಿಯ ಸುಲ್ತಾನನ ದರ್ಬಾರದಲ್ಲಿ ಓದಿ ಪಂಡಿತ ಪಾಮರರಿಂದ ಮೆಚ್ಚುಗೆಯನ್ನು ಗಳಿಸಿದಿರಿ. ತನ್ನ ಕುರಿತು ಬರೆದ ವಿದ್ವತ್ ಪೂರ್ಣವಾದ ಮಹಾ ಕಾವ್ಯವನ್ನು ಓದಿ, ಓದಿಸಿ ಮಹಮ್ಮೂದನು ಆನಂದದಿಂದ ತುಂಬಿ ತುಳುಕಾಡಿದನು. ಅದೆಲ್ಲ ಆಯಿತು. ಆದರೆ ಬಹುಮಾನದ ಪ್ರಶ್ನೆ ಬಂದಾಗ ಆತ ಹೊಯ್ದಾಡಿ ಹೋದ. 'ಇಷ್ಟು ಅಲ್ಪಾವಧಿಯಲ್ಲಿ ಬರೆದ ಈ ಗ್ರಂಥಕ್ಕೆ ಅರುವತ್ತು ಸಾವಿರ ಭಂಗಾರದ ನಾಣ್ಯಗಳನ್ನು ಕೊಡಲಾರೆ. ಅಷ್ಟೆ ಬೆಳ್ಳಿಯ ನಾಣ್ಯಗಳನ್ನು ಮಾತ್ರ ಕೊಡುತ್ತೇನೆ. ಬೇಕಾದರೆ ಸ್ವೀಕರಿಸಬೇಕು' ಎಂದನು ಮಹಮ್ಮೂದ. ನೀವಿಬ್ಬರೂ ಅರಸನ ಈ ನಿಷ್ಠುರದ ನುಡಿಯನ್ನು ಕೇಳಿ ಕಂಗೆಟ್ಟಿರಿ. ಹಣವನ್ನು ಸ್ವೀಕರಿಸದೆ ನೇರವಾಗಿ ಮನೆಗೆ ಹೊರಟು ಬಂದುದನ್ನು ಕಂಡು ನನಗೆ ಸೋಜಿಗ ಸಾನಂದವಾಯಿತು. ಏಕೆಂದರೆ ನನ್ನದೂ ಅಂತಹದೇ ಸ್ವಭಾವ !

ದೊರೆಯಾದರೇನು ? ದಿವಾನನಾದರೇನು ? ನಮಗೇನಂತೆ ? ಸತ್ಯಕ್ಕೆ ವಂಚಿಸಿದವನು ಕೊಲೆಗಡಕನಿಗಿಂತಲೂ ಕೀಳು. ಆತ್ಮಶ್ರೀಗೆ ಕಲಂಕ ಹಚ್ಚಲು ಬಂದವನನ್ನು ಚಮ್ಮಟಿಗೆಯಿಂದ ಬಡಿದು ಓಡಿಸುವುದೊಂದೇ ಉಪಾಯ. ಸಾಕ್ರೆಟಿಸ್ ತತ್ವ ಮಾರಿಕೊಳ್ಳಲಿಲ್ಲ. ಅದಕ್ಕಾಗಿ ಆತ ವಿಷ ಕುಡಿದ. ಏಸುಕ್ರಿಸ್ತ ತನ್ನ ಆತ್ಮ ವಿಶ್ವಾಸವನ್ನು ವಂಚಿಸಲಿಲ್ಲ. ಅದಕ್ಕಾಗಿ ಆತ ಎದೆಗೆ ಮೊಳೆ ಬಡಿಸಿಕೊಂಡು ಸತ್ತ. ನೀವೂ ಆ ಪುರುಷೋತ್ತಮರು ತೋರಿದ ದಾರಿಯನ್ನೇ ತುಳಿದುದನ್ನು ಕಂಡು ನನಗೆ ಪರಮಾನಂದವಾಯಿತು. ಶಾಹಬಾಸ್ ! ಬಹು ಜಾಗರೂಕತೆಯಿಂದ ವರ್ತಿಸಿದಿರಿ !

ಮುಂದೇನು ? ನೀವು ಕೈಕೊಂಡ ಯೋಜನೆಗೆ ನಾನೂ ಒಪ್ಪಿದೆ. ಘಜನಿಯ ಮಹಮ್ಮೂದನ ಜೀವನ ರೀತಿಯನ್ನು ವ್ಯಂಗ್ಯವಾಗಿ ಚಿತ್ರಿಸಿ ಆತನ ಸಮುಕ್ಷಮದಲ್ಲಿಯೇ ಅವನಿಗೊಂದು ಗೋರಿಯನ್ನು ಕಟ್ಟಿದಿರಿ. ನಿಮ್ಮ ವ್ಯಂಗ್ಯಕಾವ್ಯ ಕ್ಷಣಕಾಲದಲ್ಲಿಯೇ ಎಲ್ಲರ ಬಾಯಲ್ಲಿಯೂ ನಲಿಯ ತೊಡಗಿತು. ಮಹಮ್ಮೂದನು ಅದನ್ನು ಕೇಳಿ ಸಂತಪ್ತನಾದನು. ಉಕ್ಕಿಬಂದ ಅವನ ಹೃದಯ-ಸಮುದ್ರ ರೋಷದ ತೆರೆಗಳಿಂದ ತಾಡಿತವಾಯಿತು. ನಿಮ್ಮಿಬ್ಬರನ್ನು ಸೆರೆ ಹಿಡಿದು ನ್ಯಾಯಾಸ್ಥಾನದಲ್ಲಿ ನಿಂದಿರಿಸಿ ಬಹು ಕಠೋರ ಶಿಕ್ಷೆಗೆ ಗುರಿ ಮಾಡಿದನು. ನಿಮಗೆ ಏನು ಶಿಕ್ಷೆ ಆಯಿತೆನ್ನುವುದನ್ನು ಹೇಳಲಾ ? ದೇವರನ್ನು ಸ್ಮರಿಸಿ ನಿನಗೆ ಮಂಗಲವಾಗಲೆಂದು ಕೋರುತ್ತೇನೆ. ನಿಮ್ಮನ್ನು ವಧಸ್ಥಾನದಲ್ಲಿ ತಂದು ನಿಲ್ಲಿಸಿದರು. ಅಯ್ಯೋ........ಕೊಲೆ ಪಾತಕರ ಕೊಡಲಿಯೇಟು ತಲೆಯ ಮೇಲೆ ಬಂತು........ಅಗೋ........ ಬಿ........ತ್ತು........ !

ಕೈ ತಪ್ಪಿ ಬಿದ್ದ ಕನ್ನಡಿಯನ್ನು ತಿರುಗಿ ಹೊಂದಿಸುವದಾದೀತೆ ? ಮಹಮ್ಮೂದನು ತಾನು ಮಾಡಿದ ಕೃತ್ಯಕ್ಕಾಗಿ ಪಶ್ಚಾತ್ತಾಪ ಪಟ್ಟುಕೊಂಡು ನಿಮಗಾದ ಶಿಕ್ಷೆಯನ್ನು ನಿಲ್ಲಿಸಲು ಆಜ್ಞೆ ಹೊರಡಿಸಿ ವಧಸ್ಥಾನದೆಡೆಗೆ ರಾಹುತರನ್ನು ಅಟ್ಟಿದನು. ಆಗಲೆ ಅರವತ್ತು ಸಾವಿರ ಭಂಗಾರದ ನಾಣ್ಯ ಗಳನ್ನು ನಿಮ್ಮೆಡೆಗೆ ಕಳುಹಿಸಿಕೊಟ್ಟನು.

ಆದರೆ.... ? ಬಹುಮಾನವನ್ನು ಹೊತ್ತುಕೊಂಡು ನಡೆದ ಆನೆಗಳ ಸಮೂಹ ನಿಮ್ಮ ಪ್ರೇತ ವಾಹನವನ್ನು ಸಂದರ್ಶಿಸಿದವು. ನನಗೆ ಅತೀವ ವೇದನೆಯಾಯಿತು. ಹೃದಯ ಬತ್ತುವನಕೂ ಕಣ್ಣೀರು ಕರೆದೆ !

ತಮ್ಮಾ, ಇದೊಂದು ಬರೀ ಕನಸು. ಇದನ್ನು ಓದಿ ನಿನಗೆ ನಗೆ ಬರುತ್ತದೆ. ನಗು. ನಗುವೆ ಜೀವನದ ನಂಬುಗೆಯ ಜೊತೆಗಾತಿ. ಅವಳಿಂದಲೇ ಬಾಳ ಬಳ್ಳಿ ಹೂ ಕಾಯಿ ಹಣ್ಣು ಬಿಡುತ್ತದೆ.

ಈ ಕನಸನ್ನು ನಿನಗೆ ಬರೆದು ತಿಳುಹಿಸಿದಾಗಲೆ ನನ್ನ ಮನಸ್ಸಿಗೆ ಸ್ವಲ್ಪ ಸಮಾಧಾನ ದೊರಕಿದಂತಾಯಿತು. ಕನಸಿನಲ್ಲಿ ಕಂಡ ಕಣ್ಣೀರು ಮಾನಸಿಕ ಶರೀರದ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ. ಎಚ್ಚರಿ

ದ್ದಾಗ ಬಂದ ದುಃಖ ದೈಹಿಕ ಶರೀರದ ಮೇಲೆ ನೋವನ್ನುಂಟು ಮಾಡು ತ್ತದೆ. ಎಂತೇ ಇರಲಿ. ಈ ಕಾಗದ ಬರೆಯುವುದರಿಂದ ನನಗೆ ಆನಂದ ವುಂಟಾಗಿದೆ.

ಬೇಗ ಕಾಗದ ಬರೆದು ನಿನ್ನ ಒಪ್ಪಿಗೆ ತಿಳುಹಿಸು. ಇದನ್ನು ಓದುವ ದರಿಂದ ನಿನ್ನ ಮನಸ್ಸು ಹಗುರಾದರೆ ಅದನ್ನೇ ಬಹುಮಾನವೆಂದು ತಿಳಿಯುತ್ತೇನೆ.

ಇತಿ,

ನಿನ್ನಣ್ಣ.

*   *   *   *

**ಓಲೆ........೨** ಹಿರೇಮಲ್ಲೂರು

ತಮ್ಮ ಶಿವನಿಗೆ,

ನಿನ್ನ ಓಲೆ ಕೈಗೆ ಬಂದಿದೆ. ಬಹು ಆಸ್ಥೆಯಿಂದ ನಿನ್ನ ಬರಹ ಅದೆಷ್ಟೋ ಸಾರೆ ಓದಿದೆ. ನಿನ್ನ ಮನಸ್ಸು ಸರಳವಿದ್ದಂತೆ ಕಾಗದವೂ ಸರಳವಿದೆ.

ಅಬ್ಬಾ! ಫಿರ್ದೌಸಿಯ ಬೆನ್ನನ್ನು ಎಷ್ಟು ವಿಶ್ವಾಸದಿಂದ ತಟ್ಟಿ ಕಾಗದ ಬರೆದಿದ್ದೀಯಲ್ಲ ನೀನು! ನಿಜವಾಗಿಯೂ ಅವನನ್ನು ಹತ್ತಿರದವ ನೆಂದೇ ಭಾವಿಸಿ ಬರೆದ ನಿನ್ನ ಸವಿ ನುಡಿಯನ್ನು ಓದಿ ಓದಿ ಆನಂದ ಪಟ್ಟೆ. ಒಳ್ಳೆಯ ಸಹೃದಯನಪ್ಪ ನೀನು!

ನೀನಂದಂತೆ ಫಿರ್ದೌಸಿ ವ್ಯಂಗ್ಯಕಾವ್ಯ ಬರೆದು ಒಳ್ಳೆಯದನ್ನೆ ಮಾಡಿದ. ಮಹಮ್ಮೂದನ ಸಿರಿಯ ಮಂದಿರದ ಮೇಲೆ ವಾಕ್ ಸಿಡಿಲನ್ನು ಬಿಟ್ಟು ಆ ಗರ್ವಿಯ ಮತ್ತನ್ನು ರಸಾತಳಕ್ಕೆ ಇಳಿಸುವಲ್ಲಿ ನ್ಯಾಯವಾದ ಮಾರ್ಗವನ್ನು ಕವಿ ಅನುಸರಿಸಿದನೆಂದೇ ಹೇಳಬೇಕು. ಸಿರಿಯ ಆಸೆ, ಹೆಸರಿನ ಆಸೆಯನ್ನು ಪಾದದಡಿಯಲ್ಲಿರಿಸಿ ಸತ್ಯ ಸೌಂದರ್ಯಗಳ ಉಪಾಸನೆ ಯಲ್ಲಿ ನಿರತರಾದ ಕಲೋತ್ತಮರಿಗೆ ಈಶನೇನು? ದಾಸನೇನು? ಯುಗ

ಯುಗಗಳವರೆಗೂ ಓರಂತೆ ದುಡಿದು ಅಜನು ಕಟ್ಟಬಹುದಾದ ಕೋಟಿ ಕೋಟಿ ಕೊತ್ತಳಗಳನ್ನು ಸಾಹಿತ್ಯಾಚಾರ್ಯರು ನಿಮಿಷವೊಂದರಲ್ಲಿ, ಎವೆ ತೆರೆದಿಕ್ಕುವ ಹೊತ್ತಿನಲ್ಲಿ ಸೃಜಿಸ ಬಲ್ಲರು. ಅಂತಹರು ಅನ್ಯಾಯ, ದುರ್ವರ್ತನಗಳನ್ನು ಸಹಿಸಿಯಾರೇ? ಸೋಮನಾಥದ ಜ್ಯೋತಿರ್ಲಿಂಗಕ್ಕೆ ಕೊಡಲಿಯೇಟೊಂದನ್ನು ಹಾಕಿ ಪುಡಿ ಪುಡಿ ಮಾಡಿ ಅಲ್ಲಿಯ ಧನ-ದೌಲತ್ತನ್ನು, ವಜ್ರ-ವೈಢೂರ್ಯಗಳನ್ನು ರಾಸಿ ರಾಸಿಯಾಗಿ ಹೇರಿಕೊಂಡು ಬಂದು ಘಜನಿಯನ್ನು ಇಂದ್ರನ ಅಮರಾವತಿಗೆ ಸರಿಗಟ್ಟುವಂತೆ ಮಾಡಿದ ಮಹಮ್ಮದನ ಸಿರಿ-ಸಂಪತ್ತನ್ನೆಲ್ಲ ಬರೀ ಒಂದು ಲೇಖನಿಯ ಪ್ರಭಾವದಿಂದ ಮಣ್ಣುಗೂಡಿಸಿ, ಅವನ ಉಜ್ವಲ ಜೀವನ ಚರಿತ್ರೆಯಲ್ಲಿ ಕಲಂಕಯುಕ್ತವಾದ ಸನ್ನಿವೇಶಗಳನ್ನು ಸೇರಿಸಿ ದೊರೆ ಬದುಕಿರುವಾಗಲೆ ಅವನಿಗೊಂದು ಶಾಶ್ವತ ಗೋರಿಯನ್ನು ಕಟ್ಟಿದ ಕವಿಯ ಪ್ರತೀಕಾರ ಶಕ್ತಿಯನ್ನು ನೀನು ಬಾಯ ತುಂಬ ಹೊಗಳಿದ್ದೀಯಲ್ಲ!

ಇರಲಿ ಬಿಡು. ಇನ್ನು ಸ್ವಂತ ಜೀವನದ ವಿಚಾರ. ನಿಮ್ಮ ಸಾಲೆಯವರು ಪರೀಕ್ಷೆಯಲ್ಲಿ ಮೇಲ್ತರಗತಿಯಲ್ಲಿ ಬಂದವರಿಗೆ ಬಹುಮಾನ ಕೊಡುವರೆಂದು ತಿಳಿಸಿದ್ದೀಯೆ. ಅದೆಲ್ಲ ನಿನ್ನ ಯತ್ನಕ್ಕೆ ಸೇರಿದುದು. ಎಷ್ಟಾದರೂ ನೀನು ಫಿರ್ದೌಶಿಯ ಗೆಳೆಯ. ನಿನ್ನ ಕಾವ್ಯ ಜೀವನದ ಏಳ್ಗೆಯಲ್ಲಿ ನನಗೆ ವಿಶ್ವಾಸವಿದೆ. ಇಂದಿಲ್ಲ ನಾಳೆ ನೀನು ನಮ್ಮ ನುಡಿದೇವಿಯ ಆರಾಧಕರ ಗುಂಪಿನಲ್ಲಿ ಬಂದು ಸೇರಲೂ ಬಹುದೆಂಬ ವಿಶ್ವಾಸ ನಾನು ತಳೆದಿದ್ದೇನೆ. ಕಾಲನು ಮಾತ್ರ ಆ ಅವಧಿಯನ್ನು ಒದಗಿಸಿ ಕೊಡಬೇಕು. ಫಿರ್ದೌಶಿಗೆ ಮಹಮ್ಮದ ಅನ್ಯಾಯ ಮಾಡಿದಂತೆ ಮಾತ್ರ ವಿಧಿ ವಂಚಿಸದಿರಲಿ! ನೀನಾಗಬಹುದು ವಾಣಿಯ ವೀಣೆ!

ಇತಿ,

ನಿನ್ನಣ್ಣ.

* * * *

ಓಲಿ... ....೩ ಹಿರೇಮಲ್ಲೂರು.

ಶಿವನ ಅಧ್ಯಾಪಕರಿಗೆ,

ತುಂಬಿ ಬಂದ ದುಃಖವನ್ನು ನುಂಗಿಕೊಂಡು ನಿಮಗೀಗ ಕಾಗದ ಬರೆಯುತ್ತಿದ್ದೇನೆ. ನಿಮ್ಮೂರ ಶಾಲೆಯಲ್ಲಿ ಪರೀಕ್ಷೆ ಕೊಟ್ಟು ಮನೆಗೆ ಬಂದ ನನ್ನ ತಮ್ಮನು ಬಹಳ ದಿನಗಳವರೆಗೆ ಬದುಕಲಿಲ್ಲ. ಪರೀಕ್ಷೆಯಲ್ಲಿ ಮೇಲ್ತರಗತಿಯಲ್ಲಿ ಬಂದವನಿಗೆಂದು ನೀವು ಕೊಟ್ಟು ಕಳುಹಿಸಿದ ಬಹುಮಾನವನ್ನು ಸ್ವೀಕರಿಸುವವನೇ ಇಲ್ಲದಾಗಿದ್ದಾನೆ. ನಿಮ್ಮ ಬಹುಮಾನವನ್ನು ಹೊತ್ತುಕೊಂಡು ಅಂಚೆಯ ಜವಾನ ಮನೆಗೆ ಬಂದಾಗ ಸುಡುಗಾಡದಲ್ಲಿ ಶಿವನ ಕಳೇಬರದ ಅಂತ್ಯಕ್ರಿಯೆ ನಡೆದಿತ್ತು.

ಮಾಸ್ತರೇ, ಈ ಹೊತ್ತಿಗೆ ಹೆಚ್ಚಿಗೆ ಬರೆಯಲು ಶಕ್ತಿ ಸಾಲದಾಗಿದೆ. ಹಿಂದೊಮ್ಮೆ ನಮ್ಮ ಶಿವ ನಿಮ್ಮೂರಿನಲ್ಲಿದ್ದಾಗ ಅವನಿಗೆ ಫಿರ್ಯಾಶಿಯನ್ನು ಕುರಿತು ನಾನು ಕಂಡ ಕನಸೊಂದನ್ನು ವಿವರಿಸಿದ್ದೆ. ಮುಂಬರುವ ದುರಂತ ಘಟನೆಯನ್ನು ಆ ಕನಸು ಸೂಚಿಸುವದನ್ನು ನಾನು ಅರಿಯದೇ ಹೋದೆ. ಇಂದು ಆ ಸಂಗತಿ ನೆನಪಿಗೆ ಬಂದು ನನ್ನನ್ನು ಗಾಸಿ ಗೊಳಿಸುತ್ತಿದೆ. ನನ್ನ ದುಃಖ ಶಮನಕ್ಕೆ ನೀವು ಕಳುಹಿಸಿದ ಬಹುಮಾನವೇ ಶಾಂತಿಯೆಂದು ಭಾವಿಸಲೇ ?

ವಂದನೆ. ವಿಶ್ವಾಸವಿರಲಿ.

ನಿಮ್ಮವ,
ಈಶ್ವರನ್.

---

# ಶಿವನೇ ಶಾಂತಿ

ಹಿರೇಮುಲ್ಲೂರು ಅಗಸೆಯ ಬಾಗಿಲ ಸೇರುವಾಗಲೆ ಎಲೆ ಬಳ್ಳಿಯ ತೋಟ ಕಾಣುತ್ತದೆ ನಿಮಗೆ. ಅದಕ್ಕೆ ' ಗೌಡರ ತೋಟ ' ಎಂದು ಹೆಸರು. ಆ ತೋಟದ ಬಾವಿಗೆ ' ಗೌಡರ ಬಾವಿ ' ಎಂತಲೂ ಕರೆಯುತ್ತಾರೆ ಹಿಂದಿನ ಕಾಲದ ಗೌಡರು ಕಟ್ಟಿಸಿದ ಬಾವಿ ಅದು. ಅವರು ಬೆಳೆಯಿಸಿದ ತೋಟವೇ ಅದು. ಮನೆಗೆ ಮುತ್ತೈದೆಯಂತೆ ನಮ್ಮೂರಿಗೆ ಆ ತೋಟ.

ಬೇಸಿಗೆಯ ಬಿಸಿಲುಗಾಲದಲ್ಲಿ ಊರ ಮಕ್ಕಳು ಬಾವಿಯ ಸುತ್ತಲೂ ನೆರೆದಿರುತ್ತಾರೆ. ನೋಡುವವಕ್ಕೆ ಅದೊಂದು ಚೆಲುವಿನ ದೃಶ್ಯ. ತಾಯ ಕಣ್ಣು ತಪ್ಪಿಸಿ ಬಂದ ಎಳೆಯ ಮಕ್ಕಳು ನೀರಿನಲ್ಲಿ ಮುಳುಗಿ ಮುಳುಗಿ ಚಳಿ ಹೆಚ್ಚಾದ ಮೇಲೆ ನಡಗುತ್ತ ದಂಡೆಯನ್ನೇರಿ ಬಂದು ಬಿಸಿಲಿಗೆ ಮೈಯೊಡ್ಡಿ ಕುಳಿತಿರುತ್ತಾರೆ. ನೀರಿನಲ್ಲಿ ಒಬ್ಬರಿಗೊಬ್ಬರು ನೀರು ಸಿಂಪಡಿಸು ತ್ತಿರುತ್ತಾರೆ. ಬಹಳ ಹೊತ್ತು ನೀರಿನಲ್ಲಿ ಮುಳುಗುವುದರ ಬಗ್ಗೆ ಸವಾಲು ನಡೆದಾಗ ನೋಡಬೇಕು ಆ ಸನ್ನಿವೇಶ! ಮುಳುಗಿದವನು ದಂಡೆಯ ಮೇಲಿನವರನ್ನು ಕಣ್ಣು ಬಿಡುವಂತೆ ಮಾಡುತ್ತಾನೆ. ಇನ್ನೊಂದು ದೃಶ್ಯ; ಒಬ್ಬನು ಮಾತನಾಡುತ್ತ ನಟಿಸುತ್ತ ಹತ್ತಿರ ಬಂದು ಯಾರನ್ನಾದರೂ ಭುಜ ಹಿಡಿದು ನೀರಿನಲ್ಲಿ ಹತ್ತಿಕ್ಕಿ ತಾನೂ ಮುಳುಗಿ ಮತ್ತೊಂದೆಡೆ ಹೋಗಿ ನಿಂತಿರುತ್ತಾನೆ. ಅಲ್ಲಿಂದ ಮತ್ತೆ ಮತ್ತೊಬ್ಬರನ್ನು ನೀರಿನಲ್ಲಿ ಕಾಲು ಜಗ್ಗಲು ಹೊಂಚು ಹಾಕುತ್ತಿರುತ್ತಾನೆ. ನೋಡಲು ಬಲು ನಗೆಯಾಟ ಅದು. ಅಂತಹ ದೃಶ್ಯಗಳನ್ನು ನೋಡುವಲ್ಲಿ ನನಗೆ ಹಬ್ಬದೂಟ.

ಏರಿಕೆಯ ಬಿಸಿಲಿನಲ್ಲಿ ಮನೆಬಿಟ್ಟು ಬಾವಿಗೆ ಬಂದರೆ ಇಳಿ ಬಿಸಿಲಿ ನಲ್ಲಿಯೇ ಮನೆಗೆ ಹೋಗುವುದು ನನ್ನ ನಿತ್ಯ ಕ್ರಮ. ತಾಯಿ ದಿನವೂ ನನಗೆ ' ನೀರು ಕುತ್ತ ' ಎಂದು ಹೇಳುವರು. ನನ್ನ ನಿತ್ಯ ಕ್ರಮಕ್ಕೆ ತಮ್ಮ ಸೇರಿದಾಗಲಂತೂ ತಾಯಿ ' ನೀರಾಟ ಬೇಡ ' ಎಂದು ಹಲುಬುವರು. ' ಗೌಡರ ಬಾವಿ ತೋಟಕ್ಕೆ ಹಿತ; ಮಕ್ಕಳಿಗೆ ಕೇಡು ' ಎಂದು ಏನೋ ಹೇಳುವರು.

'ನಿನ್ನದು ಇದೇ ಕತೆ, ಅವ್ವ!' ಎಂದು ತಮ್ಮ ತಾಯಿಗೆ ಹೇಳುವನು.

'ಆತ ಹೋದರೂ ನೀನು ಬೇಡಪ್ಪ' ತಾಯಿ ತಮ್ಮನಿಗಿಂತು ನುಡಿಯುವರು.

ಹಿರಿಯ ಮಗನಲ್ಲಿ ವಿಶ್ವಾಸ; ಎಳೆಯನಲ್ಲಿ ಮಮತೆ. ತಾಯಿಯ ಹೃದಯ ಎಂತಹದೆಂಬುದನ್ನು ಮಕ್ಕಳಾದವರು ಬಲ್ಲರು. ನಾವು ಬಾವಿಗೆ ಹೋಗುವಾಗ ತಾಯಿ ಹೊಸ್ತಿಲಲ್ಲಿ ನಿಂತು ನೋಡುವರು. 'ಬೇಗ ತಿರುಗಿರಿ' ಎಂದು ನುಡಿಯುವರು.

ನಾನು ತಿರುಗುವುದಿಲ್ಲ; ಈತನೇ ಮಾತ್ರ ಬರುತ್ತಾನೆ' ಎಂದು ತಾಯಿಗೆ ಆಗ ನಾನು ನಗು ಮಾತು ಆಡಬೇಕು. ಅವರಿಗೆ ಅದನ್ನು ಕೇಳಿ ನೋವಾಗುತ್ತಿರಬೇಕು. ನನ್ನ ಮಾತಿಗೆ ತಾಯಿ ಅಂದು ನೊಂದುಕೊಳ್ಳುವುದು ಈಗ ಅರ್ಥವಾಗುತ್ತಿದೆ. ಮಿಂಚಿ ಹೋದ ಮಾತಿಗೆ ಚಿಂತಿಸಿ ಫಲವಿಲ್ಲವಲ್ಲ!

* * * *

ಅಪ್ಪ ಶಾಲೆಗೆ ಹೋಗುವದನ್ನೆ ಹೊಂಚು ಹಾಕಿ ಕುಳಿತಿದ್ದೆವು. ಎರಡು ಬಡೆಯಿತು. ಮನೆ ಬಿಟ್ಟರು. ಆಗ ನಮ್ಮ ಕಾರ್ಯಕ್ರಮಕ್ಕೆ ಪ್ರಾರಂಭ.

ನಾನು, ತಮ್ಮನು ತಲೆಗೆ ಎಣ್ಣೆ ಹಚ್ಚಿಕೊಳ್ಳಬೇಕು. ತಾಯಿ ಅದನ್ನು ನೋಡುತ್ತ ನಿಲ್ಲುವರು. ಕೈಯಲ್ಲಿ ದೋತರ ಹಿಡಿದಾಗಲೆ 'ಬೇಡ' ಎನ್ನುವರು. ಹೊರಗೆ ಹೋಗುವಾಗ ಆ 'ಬೇಡ' ಇನ್ನೂ ಹೆಚ್ಚಾಗುವದು.

'ಬಾರಪ್ಪ. ದಿನವೂ ಅದೇ ಮಾತು!' ಎಂದು ತಮ್ಮನಿಗೆ ನನ್ನ ಸಲಹೆ. ಇಬ್ಬರೂ ಬಾವಿಗೆ ಬಂದೆವು. ಇನ್ನೂ ಎಂಟು ಹತ್ತು ಎಳೆಯರು ನೀರಾಟವಾಡುತ್ತಿದ್ದರು. ತಮ್ಮ ನನಗಿಂತಲೂ ಬೇಗ ನೀರಿನಲ್ಲಿಳಿದ. ಬಟ್ಟೆಗೆ ಸಾಬೂನು ಹಚ್ಚತೊಡಗಿದ.

ಆಗ ಮೇಲಿನಿಂದ ನಾನು ಒಂದು ವಸ್ತ್ರ ಒಗೆದೆ. ತಮ್ಮ ಮೇಲಕ್ಕೆ ನೋಡಿದ. 'ಅದನ್ನು ಒಗೆ' ಎಂದೆ. ಅಣ್ಣನ ಮಾತು ಮುಟ್ಟುತ್ತಿತ್ತು. ಅಷ್ಟರಲ್ಲಿಯೆ ತನ್ನದನ್ನು ಬಿಟ್ಟು ನನ್ನ ಬಟ್ಟೆಗೆ ಮೊದಲು ಕೈ ಹಾಕಿದ. ಆ ಚಿತ್ರ ಹೇಗೆ ಮರೆಯಲಿ!

ಅರಿವೆ ತೊಳೆದದ್ದಾಯಿತು. ಇಬ್ಬರೂ ಸ್ನಾನ ಮಾಡಿದೆವು. ನನ್ನ ಬೆನ್ನಿಗೆ ಆತ ಸಾಬೂನು ಹಚ್ಚಿದ. ಆತನ ಬೆನ್ನು ನಾನು ತಿಕ್ಕಿದೆ. ದೇವರು ಅದನ್ನು ಕಂಡು ಮಚ್ಚರಗೊಂಡಿರಬೇಕು. ಅದು ಹೇಗೆ?

ತಮ್ಮನೊಡನೆ ನಾನು ಗೌಡರ ಬಾವಿ ಇಳಿದು ಮಿಂದುದು ಅದುವೆ ಕೊನೆಯದು.

*                    *                    *                    *

ಮೂರು ತಿಂಗಳು ತಮ್ಮ ಬಿಡುವಿಲ್ಲದೆ ಬೇನೆಯ ನೋವನುಂಡ. ವೈದ್ಯರು ಆತನ ಮೈಮೇಲೆ ಒಂದು ಹನಿ ನೀರು ಬೀಳದಂತೆ ನೋಡಿಕೊಳ್ಳಬೇಕೆಂದು ಎಚ್ಚರಿಕೆ ಕೊಟ್ಟರು. ತಾಯಿಗೆ ಅದು ಹೇಗೆ ಪರಿಣಮಿಸಿರಬೇಡ!

ವೈದ್ಯರ ಮಾತು ಸುಳ್ಳಾಯಿತು.

ಸ್ಮಶಾನ ಯಾತ್ರೆಗೆ ಹೊರಡುವ ಮುನ್ನ ತಾಯಿ ಎಣ್ಣೆ ಹಚ್ಚಿ ಶಿವನಿಗೆ ಸ್ನಾನ ಮಾಡಿಸಿದರು.

ನಾನದನ್ನು ಗೊಂಬೆಯಂತೆ ನೋಡಿದೆ.

ಕೊನೆಯ ಸ್ನಾನ ಮುಗಿಯಿತು. ತಮ್ಮ ಮನೆ ಬಿಟ್ಟು ಹೊರಬಿದ್ದ. ನಾಲ್ಕು ಮಂದಿ ಹೆಗಲ ಮೇಲೆ ಮಲಗಿಕೊಂಡು ಮೇಲೆ ಮೇರೆ ಮೀರಿದ ಬಾನನ್ನು ನಿರೀಕ್ಷಿಸುತ್ತಿದ್ದ.

ದಾರಿಯುದ್ದಕ್ಕೂ ಮಳೆ 'ಧೋ' 'ಧೋ' ಎಂದು ಸುರಿಯುತ್ತಿತ್ತು.

ಗೌಡರ ಬಾವಿಯ ಸ್ನಾನ ಮಗನಿಗೆ ತಂಪಾದೀತೆಂದು ಹೇಳುವ ತಾಯಿ ಈಗ ಏನು ಹೇಳುತ್ತಾರೆ? "ಶಿವನೇ........"

ತಾಯಿ ಈಗ ಮೂಕಿ. ಅವರ ಜೋಗುಳ ಹಾಡು, ಅವರ ತೊಟ್ಟಿಲ ಜೀಕು, ಅವರ ಆರೈಕೆ ನುಡಿ ಈಗ ಭೂಮಿ ದೇವಿಯ ಕೈಯಲ್ಲಿ.

ನಾನು ನಿರ್ಜೀವಿಯಂತೆ ಎವೆಯಿಕ್ಕದೆ ನೋಡಿದೆ.

ಹೆತ್ತ ತಾಯಿ ಮಗನ ಕೊಟ್ಟಳು. ಭೂಮಿ ತಾಯಿ ಎತ್ತಿಕೊಂಡಳು.

ಶಿವನೇ, ಶಾಂತಿ !

---

# ಶಿವ ಕಾಣದಾದ

ಕತ್ತಲು ಇಳೆಗೆ ಇಳಿಯುವ ಸಮಯ.

ಸಿದ್ದನ ಗುಡ್ಡದ ಓವರಿಯಲ್ಲಿ ‘ ಮೇದು ’ ಕುಂಬಾರ ಕೆರೆಯಲ್ಲಿ ನೀರ ನೀಂಟೆ ಮನೆಯ ಕಡೆ ಮುಖ ಮಾಡಿಕೊಂಡು ಓಡಿ ಓಡಿ ದನಗಳು ಬರುತ್ತಿರುತ್ತವೆ. ಅಲ್ಲಲ್ಲಿ ನೀಳವಾಗಿ ಬೆಳೆದ ಆಲದ ಮರ, ಮಾವಿನ ಮರಗಳಲ್ಲಿ ಹಕ್ಕಿಗಳು ಹಾರಿ ಬಂದು ಕುಳಿತಿರುತ್ತವೆ. ಹೆಂಗಸರು ಹುಲ್ಲು ಹೊರೆ ಹೊತ್ತುಕೊಂಡು, ಗಂಡಸರು ಕುಡ ಮಿಣಿಗಳನ್ನು ಎತ್ತುಗಳ ಮೇಲೆ ಹೇರಿಕೊಂಡು ಮಾತುಕತೆಯಾಡುತ್ತ ಬರುತ್ತಿರುತ್ತಾರೆ.

ಮನೆಯನ್ನು ಹಿಂದೆ ಬಿಟ್ಟು ‘ ಮಾದಿ ’ ಹಳ್ಳವನ್ನು ದಾಟಿ ಎಡಗಡೆಗೆ ಇದ್ದ ಸ್ಮಶಾನ ಭೂಮಿಯನ್ನು ಕಂಡೂ ಕಾಣದಂತೆ ನೋಡುತ್ತ ನಮ್ಮೂರಿನ ಪೂರ್ವಾಭಿ ಮುಖವಾಗಿ ಹೊರಟರೆ ದಿನವೂ ಅದೇ ದೃಶ್ಯ. ಅದೇ ದನಕರು. ಅದೇ ಹಕ್ಕಿಗಳು. ಅದೇ ಕೂಲಿ ಕುಂಬಳಿಗಳು.

ಕುಂಬಾರ ಕೆರೆಯ ಹತ್ತಿರ ಬರುವಾಗಲೆ ಇದಿರಿಗೆ ನಮ್ಮೂರ ಓಲೆಕಾರ ಹನೀಪನು ಬಂದಿರುತ್ತಾನೆ. ತಲೆಯ ಮೇಲೆ ಚಿಂದಿಯಾದ ರುಮಾಲು. ಮೈ ಅರ್ಧ ಬತ್ತಲೆ. ನಡುವಿಗೆ ಕೆಳಭಾಗವನ್ನು [illegible] ಹರಿದ ದೋತರ. ಒಂದು ಕೈಯಲ್ಲಿ ನೆಗ[illegible] ಇರುತ್ತದೆ. ಇನ್ನೊಂದು ಕೈ ನೆಲದ ಮೇಲೆ ಬಿದ್ದ ಕ[illegible] ಆರಿಸಲು ಹವಣಿಸುತ್ತಿರುತ್ತದೆ.

ನಾನು ಇದಿರಿಗೆ ಬರುವಾಗಲೆ ‘ ಸಲಾಂ ’ ಮಾಡುತ್ತಾನೆ. ಪ್ರತಿಯಾಗಿ ನಾನೂ ಮಾಡುತ್ತೇನೆ. ಕ್ಷೇಮದಿಂದಿದ್ದರೂ ‘ ಎಲ್ಲವೂ ನೆಟ್ಟಗೇ, ಅಪ್ಪ ? ’ ಎಂದು ಕೇಳುತ್ತಾನೆ. ಜತೆಗೆ ನಗರದ ಸಮಾಚಾರವನ್ನೂ ಕೇಳುತ್ತಾನೆ. ಯುದ್ಧದ ಸುದ್ದಿ, ಬರಗಾಲದ ಸುದ್ದಿ ಎಲ್ಲವನ್ನು ಪ್ರಶ್ನಿಸುತ್ತಾನೆ. ನಾಲ್ಕು ಮಾತು ಹೇಳಿ ಮುಂದುವರೆಯುತ್ತಿರುವಾಗಲೆ ಮತ್ತೆ ಸಿಲ್ಲಿಸಿ ಕೇಳುತ್ತಾನೆ. ‘ ಇನ್ನು ಎಷ್ಟು ದಿನ ಇರುತ್ತೀರಿ ಇಲ್ಲಿ ? ತಮ್ಮ ಬಂದಾರೇ ? ಬಹಳ ಓದೀರಿ.

ಸಂತೋಸ ನನ್ನಪ್ಪ.' ಅವನ ಈ ಹರಕೆ ನುಡಿಗೆ ಪ್ರತ್ಯುತ್ತರ ಕೊಡುತ್ತಿರುವಾಗಲೆ ನಗುತ್ತ ಇನ್ನೊಮ್ಮೆ 'ಸಲಾಂ' ಮಾಡಿ ಹೋಗುತ್ತಾನೆ.

ಊರಿಗೆ ರಜೆಯ ದಿನಗಳಲ್ಲಿ ಹೋದಾಗ ದಿನವೂ ಸಂಜೆಗೆ ಈ ನೋಟ; ಈ ಮಾತು ಕತೆ. ನನಗೆ ಹನೀಪ ಕೂಡುವುದು ಊರಲ್ಲಿ ಅಲ್ಲ; ಆ ಹಾದಿಯಲ್ಲಿಯೇ ಮಾತ್ರ. ಒಂದು ಸಂಜೆ ಆ ದಾರಿ ಹಿಡಿದು ಹೋಗದಿದ್ದರೆ ಅಂದು ಬಾಳಿಗೆ ಕತ್ತಲು ಬಂದಂತಾಗುತ್ತದೆ.

*  *  *  *

ವೈಶಾಖ ಮಾಸದ ಸಂಜೆ.

ನಿತ್ಯದಂತೆ ನಮ್ಮೂರಿನ ಮೂಡಲೆಡೆ ವಾಯುವಿಹಾರಕ್ಕೆ ಸಾಗಿದ್ದೆ. ಜತೆಯಲ್ಲಿ ತಮ್ಮನಿದ್ದ. ಇಬ್ಬರೂ ಕೂಡಿ ಕಳ್ಳಿಯ ಸಾಲಿನಲ್ಲಿ 'ಕವ್' ಗುಡುತ್ತಿದ್ದ ಹಕ್ಕಿಗಳನ್ನು ಹಾರಿಸುತ್ತ ಅವು ಹಾರಿಹೋದುದನ್ನು ನೋಡಿ ಅಚ್ಚರಿಬಡುತ್ತ ಮುಂದೆ ಸಾಗಿದೆವು.

ಕುಂಬಾರ ಕೆರೆ ಹತ್ತಿರ ಬಂದಿತು. ಇದಿರಿನಲ್ಲಿ ಹನೀಪ ಬುಟ್ಟಿಯನ್ನು ಹಿಡಿದು ಕಾಕುಳ್ಳುಗಳನ್ನು ಆರಿಸುತ್ತ ಬಂದೇ ಬಿಟ್ಟ. 'ಸಲಾಂ' ಮಾಡಿಯೇ ಬಿಟ್ಟ. ಅವನಿಗಿಂತಲೂ ನಾನೇ ಮೊದಲು 'ಸಲಾಂ' ತೀರಿಸಿದೆ.

ಜತೆಗೆ ತಮ್ಮ ಇದ್ದುದನ್ನು ನೋಡಿ ಹನೀಪ ಹರುಷಗೊಂಡ. ಅವನ ಕಣ್ಣುಗಳೇ ಆತನ ಆನಂದವನ್ನು ಸೂಚಿಸುತ್ತಿದ್ದವು. ಮಾತನಾಡಲು ಹವಣಿಸುತ್ತಿದ್ದ ಅವನ ತುಟಿಗಳು ಆ ಸೂಚನೆಯನ್ನು ಸಮ್ಮತಿಸುವಂತೆ ತೋರುತ್ತಿದ್ದವು. ಅಣ್ಣ ತಮ್ಮಂದಿರಿಬ್ಬರೂ ಅಂದು ಅವನೊಡನೆ ಸಂತಸದ ಸುದ್ದಿಗಳನ್ನು ಆಡಿದೆವು. ಮಾತು ಮುಗಿದ ಮೇಲೆ ಹನೀಪ ತನ್ನ ಹಾದಿ ಹಿಡಿದ. ನಾವು ಮುಂದುವರೆದೆವು. ಕತ್ತಲಲ್ಲಿ ಕರಗಿ ಹೋದೆವು. ನನಗೆ ತಮ್ಮ ಕಾಣುತ್ತಿರಲಿಲ್ಲ. ತಮ್ಮನಿಗೆ ನಾನು ತೋರುತ್ತಿರಲಿಲ್ಲ. ಅದು ವಿಧಿಯ ಕಾರ್ಯ!

*  *  *  *

ಹನೀಪನೊಡನೆ ಆ ದಿನ ಮಾತನಾಡಿ ಮನೆಗೆ ಹೋದ ಮೇಲೆ ತಮ್ಮ ಹೊಟ್ಟೆನೋವಿನಿಂದ ಮಲಗಿದ.

ಹೊಟ್ಟೆ ನೋವು ನಿಂತಿತು. ಜ್ವರ ಬಂದವು.

ದೇವರಿಗೆ ಬೇಡಿದ್ದಾಯಿತು. ಹರಕೆ ಹೊತ್ತದ್ದಾಯಿತು. ಯಾರಿಗೂ ಕರುಣೆ ಬರಲಿಲ್ಲ.

ಹಳ್ಳಿಯ ವೈದ್ಯ ಯತ್ನ ಮಾಡಿದ. ನಗರದ ವೈದ್ಯ ತಲೆ ಖರ್ಚು ಮಾಡಿದ. ಯಮನಿಗೂ ಕರುಣೆ ಹುಟ್ಟಲಿಲ್ಲ.

ಮೂರು ತಿಂಗಳು ಓರಂತೆ ತಮ್ಮ ಮಲಗಿದಲ್ಲಿಯೇ ಮಲಗಿದ. ಅಂದು ಕಂಡ ಸಂಜೆ ಅಂದಿಗೇ ಕೊನೆಯದಾಯಿತು. ಆ ದನಗಳಿಲ್ಲ. ಆ ಹಕ್ಕಿಗಳಿಲ್ಲ. ಆ ಕೂಲಿ ಕುಂಬಳಿಗಳಿಲ್ಲ. ಆ ಹನೀಪ ಇದ್ದೂ ಇರಲಿಲ್ಲದಾಯಿತು.

ತಮ್ಮ ಶನಿವಾರ ಮಲಗಿ ಶನಿವಾರ ಹೋದ. ಮರೆಯದಂತಹ ನೋವನ್ನುಂಟು ಮಾಡಿತು ಆ ದಿನ. ಅಂದಿನ ಸಂಜೆಯ ವಿಹಾರವೂ ಮರೆಯದಂತಾಯಿತು. ಹನೀಪ ಇದನ್ನು ಬಲ್ಲ.

*  *  *  *

ವೈಶಾಖ ಮಾಸದ ಸಂಜೆ ನಿತ್ಯಕ್ರಮದಂತೆ ಬಂದು ಹೋದವು. ನಮ್ಮೂರಿನ ಪೂರ್ವ ದಿಕ್ಕಿನಲ್ಲಿ ಎಂದಿನಂತೆ ಸಂಚಾರವಿದೆ. ನನಗೆ ಮಾತ್ರ ಇಲ್ಲ!

ಹನೀಪನನ್ನು ಕಾಣದೆ ಮೂರು ವರುಷಗಳಾದವು. ಈಗ ಪಡುವಲೆಡೆ ಗಾಳಿ ಸೇವನೆ. ಸಂಧ್ಯಾ ಸೂರ್ಯನ ಪೂಜೆ. ದಿನ್ನೆಯ ಮೇಲೆ ಕುಳಿತಿದ್ದೆ. ಯಾರೋ ದೂರದಲ್ಲಿ ಬರುತ್ತಿದ್ದರು. ಬಂದವನು ಹನೀಪ. ' ಸಲಾಂ ' ಮಾಡಿದ. ನಾನೂ ಮುಟ್ಟಿಸಿದೆ. ಹನೀಪನನ್ನು ನೋಡಿದೆ. ಅವನು ಹನಿಗಣ್ಣಿನಿಂದ ನಿಂತುಕೊಂಡಿದ್ದ. ಹನೀಪನನ್ನು ದಿಟ್ಟಿಸುವಾಗಲೆ ನನ್ನ ಕಣ್ಣು ಮಂಜಾಯಿತು.

ಮೂಕರಂತೆ ಇಬ್ಬರೂ ನಿಂತೆವು. ಹಕ್ಕಿಗಳು ಹಾರಿ ಹೋದವು. ರವಿ ಮುಳುಗಿದ.

' ನಾವೂ ಮುಳುಗಲೇ ಬೇಕು ' ಎಂದ ಹನೀಪ.

ಶಿವ ಕಾಣದಾದ.

---

## ದೇವರಿಗೆ ಕರುಣೆ ಇಲ್ಲ

ಮಾತು ಮಿತಿಯಲ್ಲಿರಬೇಕು. ವಿಚಾರ ಹಿಡಿತದಲ್ಲಿರಬೇಕು.

ಮನುಷ್ಯನಿಗೆ ಎಲ್ಲ ಗೊತ್ತಿರುತ್ತದೆ. ಆದರೆ ಆಚರಣೆಗೆ ತರುವಂದು ತಾನು ನಿಂತ ನೆಲೆ ಎಲ್ಲಿ ಎನ್ನುವುದು ಅನುಭವಕ್ಕೆ ಬರುತ್ತದೆ. ಮಾತು ಒಮ್ಮೆ ಮುತ್ತು. ಇನ್ನೊಮ್ಮೆ ಕುತ್ತಾಗಿ ಪರಿಣಮಿಸುತ್ತದೆ. ವಿಚಾರದ ಬಗೆಗೂ ಅದೇ ಅಭಿಪ್ರಾಯ. ಮನಸ್ಸಿನಲ್ಲಿ ನೂರು ವಿಚಾರ ಮಾಡುತ್ತೇವೆ. ಒಮ್ಮೆ ವಿಚಾರ ನಮಗೆ ನೆರವಾಗಿ ಬಂದರೆ ಇನ್ನೊಮ್ಮೆ ವೈರಿಯಾಗಿ ಬರುತ್ತದೆ. ವಿಧಿಗೆ ಒಂದು ಕೈ ಮಾತಾದರೆ ಇನ್ನೊಂದು ಕೈ ವಿಚಾರ ಎನ್ನಬಹುದು.

ಗೆಳೆಯರ ಮುಂದೆ ನೂರು ಮಾತನಾಡಿದೆ. ನೂರು ವಿಚಾರ ಹೇಳಿದೆ. ತಮ್ಮನ ಮುಂದಿನ ಓದಿಗಾಗಿ ಸ್ನೇಹಿತರೊಬ್ಬರಿಂದ ಸಾಹಿತ್ಯ ದೊರಕಿಸಿದೆ. ಊರಿನಿಂದ ಮರಳಿ ಬಂದ ಮೇಲೆ ಅವರ ಸಾಹಿತ್ಯ ತಿರುಗಿ ಮುಟ್ಟಿಸುವುದಕ್ಕಾಗಿ ಭಾಷೆ ಕೊಟ್ಟೆ.

ರಜೆಗಾಗಿ ಊರಿಗೆ ಹೋದೆ. ಪರೀಕ್ಷೆ ಮುಗಿಸಿಕೊಂಡು ತಮ್ಮನೂ ಬಂದ. ಇನ್ನೊಂದು ಕೊನೆಯ ಪರೀಕ್ಷೆಗೆ ಅವನು ಸಿದ್ಧತೆ ಮಾಡಬೇಕಾಗಿತ್ತು.

ಒಂದು ದಿನ ಮುಂಜಾವಿನಲ್ಲಿ ತಮ್ಮನಿಗೆ ಪಾಠ ಸುರುವು ಮಾಡಿದೆ. ಓದು ನಾಲ್ಕು ದಿನ ಸರಳವಾಗಿ ಸಾಗಿತು. ಸಂಜೆಗೆ ಇದಿರಿನಲ್ಲಿ ದೀಪ ಇಟ್ಟುಕೊಂಡು ಆತನಿಗೆ ಪಾಠ ಹೇಳಿ ಕೊಡುವಾಗ ತಾಯಿ ಬಂದು ನೋಡುತ್ತ ಕುಳಿತುಕೊಳ್ಳುವರು. ಪಾಠದಲ್ಲಿ ಆತ ತಪ್ಪಿದರೆ ಒಮ್ಮೆ ಸಿಟ್ಟು, ಮತ್ತೊಮ್ಮೆ ತಪ್ಪಿದರೆ ಬಡಿತ. ತಾಯಿ ಅದಾಗದು ಎನ್ನುವರು. ಓದು ಹಾಗೆಯೆ ಬರುತ್ತದೆಯೆ ಎಂದು ನಾನು ಸವಾಲು ಹಾಕಿದಾಗ ಸುಮ್ಮ

ನಾಗುವರು. ಎರಡು ಮೂರು ಬಾರಿ ಹೊಡೆದುದನ್ನು ನೋಡುವರು. ಹೆಚ್ಚಾದರೆ ಅಲ್ಲಿಂದ ಹೋಗಿ ಬಿಡುವರು. ಅದು ತಾಯ ಮಮತೆ.

* * * *

ಒಂದು ದಿನ ರಾತ್ರಿ ಪಾಠ ಸುರುವಾಗಿತ್ತು. ತಾಯಿ ಕುಳಿತೂ ಇದ್ದರು. ತಮ್ಮನಿಗೆ ಕೆಲವು ಶಬ್ದಗಳನ್ನು ಬರೆಯಲು ಕೊಟ್ಟಿದ್ದೆ. ಪರೀಕ್ಷೆ ನಡೆದಿತ್ತು. ಕೊಟ್ಟ ಅವಧಿ ಮುಗಿಯಿತು. ಆತ ಒಪ್ಪಿಸಿದ. ತಪ್ಪುಗಳು ಕೆಲವಿದ್ದವು. ಹಾಗಾಗಬಾರದಿತ್ತೆಂದು ಸಿಟ್ಟು ಮಾಡಿದೆ. ಶಿಕ್ಷೆಯನ್ನೂ ಮಾಡಿದೆ.

ಎದ್ದು ನಿಂತು ತಪ್ಪು ಸರಿ ಮಾಡುತ್ತಿದ್ದ.

ಆ ಹೊತ್ತಿನಲ್ಲಿ ತಾಯಿಯೊಡನೆ ನಾನು ಮಾತನಾಡತೊಡಗಿದ್ದೆ. ರಜೆ ಮುಗಿದ ಮೇಲೆ ತಮ್ಮನೊಡನೆ ಮುಂದಿನ ಓದಿಗಾಗಿ ಹೋಗಬೇಕೆಂದು ಹೇಳುತ್ತಿದ್ದೆ. ಅನೇಕ ವಿಚಾರಗಳನ್ನು ತಿಳಿಸಿದೆ. ತಾಯಿ ಎಲ್ಲವನ್ನೂ ಕೇಳುತ್ತಿದ್ದರು. ಮಕ್ಕಳ ಮುಂದಿನ ಜೀವನದ ವಿಚಾರವನ್ನು ಕೇಳುವುದು ತಾಯಂದಿರಿಗೆ ಹೆಮ್ಮೆಯ ಮಾತೇನೊ !

ನಮ್ಮ ಮಾತುಕತೆ ಇಂತು ನಡೆದಾಗ ತಮ್ಮ ನಡುವೆ ಬಾಯಿ ಹಾಕಿದ.

'ಅಣ್ಣ, ಹೊಟ್ಟೆ ನೋಯುತ್ತದೆ' ಎಂದ.

'ಕೂಡಲಿ ಬಿಡು' ಎಂದು ತಾಯಿ ಹೇಳಿದರು.

'ಅದೊಂದು ನೆವ' ನಾನು ಹೇಳಿದೆ.

ಆ ಹೊತ್ತಿಗೆ ಸರಿಯಾಗಿ ದೀಪ ಆರುತ್ತ ಬಂದಿತು. ತಮ್ಮನಿಗೆ ಅದು ಏನೊ ವಿಚಾರ ಹೇಳುವಂತೆ ತೋರಿತು.

* * * *

ರಜೆ ಕಳೆಯಿತು.

‘ ನೀನು ನಿಲ್ಲಬೇಡ. ಓದು ಸಾಗಿಸು ’ ಎಂದು ಹಿರಿಯರು ಹೇಳಿದರು.

ಹಸಿಗಣ್ಣಿನಿಂದ ಊರು ಬಿಟ್ಟೆ.

ಗೆಳೆಯರು ನನಗಾಗಿ ಕಾಯ್ದು ನಿಂತಿದ್ದರು. ಬಂದ ಗೆಲವಿನಲ್ಲಿ ನೂರು ಮಾತನಾಡಿದರು. ಕಂಡ ಸಂಭ್ರಮದಲ್ಲಿ ನೂರು ವಿಚಾರ ಹೇಳಿದರು. ನಾನು ಮಾತ್ರ ಅವರು ಹೇಳುವುವದನ್ನೆಲ್ಲ ಮೂಕನಂತೆ ಕೇಳಿದೆ

‘ ತಮ್ಮ ಎಲ್ಲಿ ? ’ ಆತನ ಓದಿಗೆ ಸಾಹಿತ್ಯ ಒದಗಿಸಿ ಕೊಟ್ಟ ಗೆಳೆಯರು ಕೇಳಿದರು.

‘ ತಮ್ಮ ಇಲ್ಲ. ಪುಸ್ತಕ ತಂದಿದೇನೆ ’ ವಿಚಾರ ಶೂನ್ಯನಾಗಿ ಇಂತು ಉತ್ತರ ಹೇಳಿದೆ.

ಎಲ್ಲರೂ ಬೆರಗುವಡೆದು ನನ್ನ ಕಡೆ ನೋಡಿದರು.

‘ ಆಸೆ ಗುಳ್ಳಿ ಒಡೆಯಿತು ’ ಎಂದೆ.

‘ ದೇವರಿಗೆ ಕರುಣೆ ಇಲ್ಲ ’ ಎಂದರು.

---

# ನೋವಿಲ್ಲ ಸತ್ತವರಿಗೆ !

ಊರ ಮುಂದಿನ ಕುಂಬಾರ ಬಾವಿ ತುಂಬಿದ್ದರೂ ನೀರು ಕುಡಿಯಲಿಕ್ಕೆ ಬರುವಂತಿಲ್ಲ. ಕಡಲ ನೀರು ಏನು ಉಪಯೋಗ ?

ನಮಗೆ ಎಳೆಯರಿಗೆ ಅದೊಂದು ಸಂಕಟ ಪ್ರಸಂಗ. ಮನೆಯಲ್ಲಿ ತಾಯಿ ಮೂರವ ಸುಂಕನ ಕಷ್ಟ ಕೆರೆಗೆ ಹೋಗಿ ನೀರು ತರುವಂತಿಲ್ಲ. ಅವರಿಗೆ ಮನೆಯ ಕಾರ್ಯವೇ ಸಾಕು ಬೇಕಾದಷ್ಟು ಒಟ್ಟಿರುತ್ತದೆ. ಅಪ್ಪನಿಗೆ ಮತ್ತಾವುದೊ ಕೆಲಸ ಮೈಮೇಲಿರುತ್ತದೆ. ನಾವು ಇದ್ದೇವಲ್ಲ ಪೋಲಿಗಳು !

ಶಾಲೆ ಬಿಟ್ಟ ಮೇಲೆ ರೊಟ್ಟಿಯ ಗಂಟು ತಲೆಯ ಮೇಲಿಟ್ಟುಕೊಳ್ಳಬೇಕು. ಮನೆ ಮನೆಗೆ ಹೋಗಿ ಓರಗೆಯ ಗೆಳೆಯರನ್ನು ಕಲೆಹಾಕಿಕೊಂಡು ಬಿಂದಿಗೆಯನ್ನು ಹೆಗಲ ಮೇಲಿಟ್ಟುಕೊಂಡು ಕಬ್ಬಕ್ಕಿಯಂತೆ ಸಾಲು ಸಾಲಾಗಿ ಕೆರೆಯ ಕಡೆ ಸಾಗಬೇಕು. ಹಾದಿಯಲ್ಲಿ ತಲೆ ತುಂಬ ಹರಟೆ. ಈಗ ಆ ಮಾತು ನೆನಸಿಕೊಂಡರೆ ಕಣ್ಣಲ್ಲಿ ನೀರು ಊರಿ ಬರುತ್ತದೆ.

ಹಾದಿಯಲ್ಲಿ ಮಂಗನಂತೆ ಮಾಡುತ್ತ ಮಣಿದು ಬರುತ್ತಿದ್ದ ಸರಿಕನೊಬ್ಬನ ಕೈ ಜಾರಿ ಬಿಂದಿಗೆ ಒಡೆಯುವುದು. ಆಗ ಅವನು ಮನೆಯವರಿಗೆ ಹೆದರಿ ಸಂಕಟಪಟ್ಟು ಉಸುಕಿನಲ್ಲಿ ಬಿದ್ದು ಉರುಳಾಡುವನು. ನಾವೆಲ್ಲ ಅವನ ಸುತ್ತು ಕೂಡಿ ಸಂತೈಸಬೇಕು. ಒಂದು ನಿಮಿಷ ಅಳು. ಇನ್ನೊಂದು ನಿಮಿಷ ನಗು. ಮತ್ತೆ ಎಲ್ಲರೂ ನಗುತ್ತ ಮುಂದುವರೆಯಬೇಕು. ಏನದು ಆ ಸೌಖ್ಯ ? ಆ ಎಳೆಯ ದಿನಗಳನ್ನು ಏನೆಂದು ನೆನಪು ಮಾಡಿಕೊಳ್ಳಲಿ ?

ಬಿಂದಿಗೆ ಒಡೆದಿದೆ. ಒಬ್ಬ ಅಳುತ್ತಾನೆ. ಆ ಚಿತ್ರ ಜೀವನದುದ್ದಕ್ಕೂ ನೆನಪು. ಮಣ್ಣಿಗೆ ಮರಳುವವರೆಗೂ ಬುತ್ತಿ.

* * * *

ನಾನು, ನನ್ನ ತಮ್ಮ ಒಂದು ಯೋಚನೆ ಮಾಡಿದೆವು.

ಬಿಂದಿಗೆ ಒಡೆದರೆ ನಮ್ಮ ತಪ್ಪಲ್ಲ. ಅದು ದೇವರ ತಪ್ಪು. ಅವನ ಹೊಣೆಗಾರಿಕೆಯಲ್ಲಿ ನಮ್ಮ ಕಾರ್ಯ ನಡೆಯಬೇಕು. ಆತನ ಆಜ್ಞೆಗೆ ನಾವು ತಲೆವಾಗಬೇಕು. ನಮ್ಮ ಕೂಗಿಗೆ ಆತ ' ಓ ' ಕೊಡಬೇಕು. ಏನು ' ಓ ' ಕೊಡಲಾರನೇ ?

ತಲೆಯ ಮೇಲೆ ಇಟ್ಟ ರೊಟ್ಟಿಯ ಗಂಟು ದೇವನಿಗೆ ಅರ್ಪಿಸುವ ತನಕೂ ನಾವು ಅದನ್ನು ರುಚಿ ನೋಡುವಂತಿಲ್ಲ; ಇದು ನಮ್ಮ ತೀರ್ಪು.

ಸುಂಕದ ಕಟ್ಟೆಯ ಕೆರೆಯ ಸುತ್ತಲೂ ಗೋಣು ಎತ್ತಿ ಊರನ್ನು ನೋಡುವಂತೆ ತೋರುವ ನಾಲ್ಕಾರು ಹೆಮ್ಮರಗಳು. ಆ ಹೆಮ್ಮರಗಳನ್ನು ನಾ ಮುಂದೆ ನೀ ಮುಂದೆ ಎಂದು ಓಡಿ ಓಡಿ ಮುಟ್ಟುವಂತೆ ತೋರುವ ಕಳ್ಳಿ. ಕಳ್ಳಿಗೆ ಗಂಟೆ ಕಟ್ಟಿರುವರೊ ಎನ್ನುವಂತೆ ಬೀಗಿ ಬೀಗಿ ಉಲಿಯುವ ನೂರಾರು ಹಕ್ಕಿ.

ಹೊಲದಲ್ಲಿ ಅಲ್ಲಲ್ಲಿ ತಿರುಗಾಡಿ ಬನಕ ಆರಿಸಿ ತಂದೆವು. ಅದನ್ನು ದೇವರೆಂದು ಕರೆದದ್ದಾಯಿತು. ಮನೆಯಿಂದ ತಂದ ಗಂಧ, ಕೆರೆಯ ನೀರು, ತಾಯಿ ಕಟ್ಟಿದ ರೊಟ್ಟಿ, ಎಳೆಯರ ಭಕ್ತಿ ಆ ದೇವನಿಗೆ ಮುಡಿಪು. ನಮ್ಮ ಬಿಂದಿಗೆ ಮನೆಗೆ ಸುರಕ್ಷಿತವಾಗಿ ಮುಟ್ಟಬೇಕೆಂದು ಪ್ರಾರ್ಥನೆ.

ದಿನವೂ ಇದೇ ಪೂಜೆ. ಇದೇ ಪ್ರಾರ್ಥನೆ.

*　　　*　　　*　　　*

ಎಂದಿನಂತೆ ಪೂಜೆ ಮುಗಿಯಿತು. ಊಟವಾಯಿತು.

ಊರ ಕಡೆ ಬಿಂದಿಗೆ ತುಂಬಿಕೊಂಡು ನಡೆದ ನಮ್ಮೂರಿನ ಮಕ್ಕಳನ್ನು ನೋಡಬೇಕು. ಅವರ ಮೈಮೇಲಿನ ಬಟ್ಟೆ ಹರಿದಿದ್ದರೇನು ? ಆ ಟೊಪ್ಪಿಗೆ ಮುದುಡಿ ಮುರಿದಿದ್ದರೇನಾಯಿತು ? ಕಣ್ಣಿನಲ್ಲಿ ತೋರುವ ಆ ಎಳೆಯರ

ಕಾಂತಿ, ಮುಖದ ಮೇಲೆ ಎದ್ದು ಕಾಣುವ ಆ ಮಕ್ಕಳ ಸೌಜನ್ಯ ನೀವು ನೋಡಲೇ ಬೇಕು.

ಮನೆಯ ಕಡೆ ಬಿಂದಿಗೆ ಹೊತ್ತುಕೊಂಡು ನಡೆದಾಗ ಒಬ್ಬ ಬಳಲಿಕೆ ಎಂದ. ಎಲ್ಲರೂ ಅವನಿಗೆ ಬೆಂಬಲವಾಗಿ ನಿಂತೆವು. ಬೇವಿನ ಮರದ ಅಡಿಯಲ್ಲಿ ಬಿಂದಿಗೆ ಇಳಿಸಿ ರಮಿಸಿದೆವು. ಮಾತುಕತೆಯಾಡಿ ತೋಳ ನೋವು ನಿಂತ ಮೇಲೆ ಮತ್ತೆ ಮನೆಗೆ ಹೋಗಲು ಎದ್ದು ನಿಂತೆವು. ಒಬ್ಬರು ಇನ್ನೊಬ್ಬರಿಗೆ ಬಿಂದಿಗೆ ಹೊರಿಸಲು ನೆರವಾಗಿ ನಿಂತರು.

ತಮ್ಮನ ಬಿಂದಿಗೆ ಎತ್ತಿದೆ. ಮೇಲೆ ಕೋಗಿಲೆ ಕೂಗಿತು. ಬಿಂದಿಗೆ ಕೈ ತಪ್ಪಿ ತಮ್ಮನ ಕಾಲಮೇಲೆ ಬಿದ್ದಿತು 'ಹೋ' ಎಂದು ಕೂಗಿದ.

ನಾಲ್ಕು ಏಟು ಕೆನ್ನೆಗೆ ಕೊಟ್ಟೆ. ಏನು ಮಾಡುತ್ತಿದ್ದಿ ಎಂದು ರೇಗಿ ಬಲವಾಗಿ ಹೊಡೆದೆ. ಅವನಿಗೆ ಮನೆಯ ಚಿಂತೆ; ಮನದ ಚಿಂತೆ. ಕಾಲ ಮೇಲೆ ರಕ್ತ. ಕೆನ್ನೆಯ ಮೇಲೆ ಗೆರೆ. ಮುಖದ ಮೇಲೆ ಚಿಂತೆ.

ತಮ್ಮನನ್ನು ದಿಟ್ಟಿಸಿದೆ. ನನ್ನ ಹೃದಯ ಕುದಿಯಿತು. ಮಾಡಬಾರದಿತ್ತು ಎಂದು ಮರುಗಿದೆ. ಆದರೇನು? ಒಡೆದ ಬಿಂದಿಗೆ ಒಂದುಗೂಡುವಂತಿರಲಿಲ್ಲ.

*　　*　　*　　*

ಊರ ಬಾವಿಯ ನೀರು ಈಗ ಸಿಹಿ. ಆ ಕಾಲ ಈಗಿಲ್ಲ. ಎಳೆ ಬಿಸಿಲು ಬಿದ್ದಿತ್ತು. ಹೊಲ ನೋಡಿಕೊಂಡು ಬರಲು ಮನೆ ಬಿಟ್ಟು ನಡೆದೆ.

ದಾರಿಯಲ್ಲಿ ಚೆಲುವಿನ ನೋಟ. ಹೊಡೆ ಹಾಕಿದ ಜೋಳ. ಹಾಲುಗಾಳು ತಿನ್ನುವ ಹಕ್ಕಿ. ಬೆಳೆ ನೋಡಿ ಹಾಡುತ್ತ ಬರುವ ರೈತರ ಕೂಗು. ಎಲ್ಲೆಲ್ಲೂ ಸೃಷ್ಟಿ ದೇವಿಯ ಪೂಜೆ.

ಎಳೆ ಬಿಸಿಲು ಸಾಗಿತು. ಹೊಂಬಿಸಿಲು ಹೋಯಿತು. ಬೆಂಬಿಸಿಲು ಬಂದಿತು. ಕ್ಷಣ ಹೊತ್ತಿನ ಹಿಂದೆ ಅಂಗಕ್ಕೆ ಹಿತವಾಗಿದ್ದುದು ಈಗ ನೋವಾಗಿ ತೋರಿತು.

ಸುಂಕದ ಕಟ್ಟೆ ನೀರು ಕುಡಿದೆ. ನೂರು ಚಿತ್ರ ಕಣ್ಮುಂದೆ ಹಾರಿ ಹೋದುವು.

ವಿಚಾರದಲ್ಲಿ ದಾರಿ ತುಳಿದು ಬಂದೆ. ಒಂದೊಂದು ಹೆಜ್ಜೆಯೂ ಕಾಲನ ಓಟವನ್ನು ಸೂಚಿಸುತ್ತಿತ್ತು.

ಬೇವಿನ ಮರದಡಿ ಬಂದು ನಿಂತೆ. ದೂರದ ನೆನಹು. ಬಿಂದಿಗೆ ಒಡೆದಿದೆ. ತಮ್ಮ ಅಳುತ್ತಿದ್ದಾನೆ. ಕಾಲ ಮೇಲೆ ರಕ್ತ. ಕೆನ್ನೆಯ ಮೇಲೆ ಗೆರೆ. ಮುಖದ ಮೇಲೆ ಚಿಂತೆ.

ಕೋಗಿಲೆ ಕೂಗಿತು.

'ನೋವಿಲ್ಲ ಸತ್ತವರಿಗೆ!' ಎಂದಿತು.

# ದೇವರ ಹೂ ದೇವರಿಗೆ

ಮೂಡಿದ ಬೆಳ್ಳಿ ಮುಳುಗಿರುತ್ತದೆ. ದನಕರುಗಳು ಹೊಲಗಳಿಗೆ ಹೋಗಲು ಕಾಯ್ದು ನಿಂತಿರುತ್ತವೆ. ಒಕ್ಕಲಿಗರು ನೇಗಿಲ ಸಾಮಾನುಗಳನ್ನು ಕಲೆಹಾಕಲು ತೊಡಗಿರುತ್ತಾರೆ. ಮುದುಕರು ಹಾಸಿಗೆ ಬಿಟ್ಟು ಬಂದು ಕಟ್ಟೆಯ ಮೇಲೆ ಮುದುಡಿಕೊಂಡು ಕುಳಿತು ಶಿವ ಸ್ಮರಣೆಯಲ್ಲಿ ಮಗ್ನರಾಗಿರುತ್ತಾರೆ. ಒಮ್ಮೊಮ್ಮೆ ಮನೆಯ ಕಾರ್ಯರಂಗದಲ್ಲಿಯೂ ಮನಸ್ಸನ್ನು ಹರಿ ಬಿಡುತ್ತಿರುತ್ತಾರೆ. ಮುತ್ತೈದೆಯರು ಹೊಸ್ತಿಲಲ್ಲಿ ರಂಗವಲ್ಲಿ ಹಾಕುತ್ತಿರುತ್ತಾರೆ. ಆ ಸಮಯದಲ್ಲಿ ನಮ್ಮೂರಿನವರಿಗೆಲ್ಲ ಒಂದು ಗೌರವ ಸನ್ನಿವೇಶ ಕಾಯ್ದು ನಿಂತಿರುತ್ತದೆ.

ಬಾಗಿದ ಬೆನ್ನು. ನೆಲದಲ್ಲಿ ಮೊಗ. ಬರಿಗಾಲು. ಬಲಗೈಯಲ್ಲಿ ಹೂವಿನ ಬುಟ್ಟಿ. ಎಡಗೈಯಲ್ಲಿ ಬೆತ್ತ. ಕಾಲ ಮೇಲೆ ನಿಂತಿರುವ ಪಂಜೆ. ತಲೆಗೆ ಸುತ್ತಿದೆ ಮೂರು ಸುತ್ತಿನ ಕಾವಿಯ ವಸ್ತ್ರ. ಮೈಗೆ ಕಸೆಯ ಅಂಗಿ. ಭಸ್ಮ ಲೇಪನ ಮಾಡಿಕೊಂಡು ಶಿವಸ್ಮರಣೆಯಲ್ಲಿ ತಲ್ಲೀನರಾಗಿ ಮೌನದಿಂದ ನಮ್ಮೂರ ಸಿದ್ದಯ್ಯನವರು ದೇವರ ಪೂಜೆಗಾಗಿ ಹೂದಿರಿಯಲು ಊರ ಮುಂದಿನ ತೋಟದ ಕಡೆಗೆ ಹೊರಟಿರುತ್ತಾರೆ.

'ಏಳಿರೆ ಸಿದ್ದಯ್ಯನವರು ಹೂವಿಗೆ ಹೊರಟಾರು. ಏಳಿರೆ ಸಾಲೆಗೆ ಹೊತ್ತಾಗಿದೆ. ಸ್ವಾಮಿಗೆ ನಮಸ್ಕಾರ ಮಾಡೇಳಿ' ಸಿದ್ದಯ್ಯನವರು ಹಾಯ್ದು ಹೋಗುವ ಓಣಿಯಲ್ಲಿ ಪ್ರತಿಯೊಬ್ಬರ ಮನೆಯಿಂದ ಈ ಕೂಗು ಕೇಳಿ ಬರಲೇ ಬೇಕು. ಆ ಕೂಗನ್ನು ನಾನು ಕೇಳದ ದಿನವೇ ಇಲ್ಲ.

ಸಿದ್ದಯ್ಯನವರು ಸಾದಾ ಜೀವಿ. ಹಳ್ಳಿಯ ಗುರು. ಭಕ್ತ ಜೀವಿ. ಜತೆಗೆ ನಾಡಿ ನೋಡುವ ವಿದ್ಯೆಯೂ ಉಂಟು. ಹಳ್ಳಿಯ ಜನರ ಕಷ್ಟನಷ್ಟದಲ್ಲಿ ಪಾಲುಗಾರರಾಗಿ ನೀತಿ ಹೇಳುವರು. ಮೃತ್ಯುಶಯ್ಯೆಯಲ್ಲಿ ಮಗನನ್ನು ಮಲಗಿಸಿ ಬಂದ ತಾಯಿಗೆ 'ಮಗ ಬದುಕುವನು' ಎಂದು ಧೈರ್ಯ ಹೇಳುವ

ಚೈತನ್ಯ ಮೂರ್ತಿ ಅವರು. ಮಗ ಸತ್ತ ಮೇಲೆ 'ಅಳಬೇಡ ತಾಯಿ. ಇದ್ದ ಮಕ್ಕಳಲ್ಲಿ ನಂಬಿಗೆ ಇಟ್ಟು ಕಾರ್ಯ ಸಾಗಿಸು. ಅವರೇ ಜೀವನದ ಸರ್ವಸ್ವವೆಂದು ನಂಬಿ ಸಾಗು, ಫಲವುಂಟು' ಎಂದು ಹೇಳಿ ಎದೆಯೊಡೆದ ತಾಯಿಯರಿಗೆ ಸಂತಯಿಸಿ ಕಾಪಿಡುವ ಗುರು ಅವರು. ಸಿದ್ದಯ್ಯನವರು ಊರಿಗೆ ಊರುಗೋಲಾಗಿ ಬಾಳಿದ್ದರಲ್ಲಿ ಸೋಜಿಗವೇನು ?

ನಮ್ಮೂರ ತೋಟದ ಹೂ ದಿನವೂ ಸಿದ್ದಯ್ಯನವರ ಸೇವೆಗಾಗಿ ಅರಳುತ್ತಿದ್ದವು. ಕಂಪಿಡುತ್ತಿದ್ದವು. ನಗುತ್ತಿದ್ದವು. ಅವರು ಹೂವಿನ ಬುಟ್ಟಿ ತುಂಬಿಕೊಂಡು ಮನೆಯ ಮುಂದೆ ಹೋಗುವಾಗ ನಮಗೆಲ್ಲ ತುಂಬ ಭಕ್ತಿ. ನಮಸ್ಕರಿಸುತ್ತಿದ್ದೆವು ಸಿದ್ದಯ್ಯನವರಿಗೆ. 'ತುಂಬು ಜೀವನ ಬಾಳಿ ಮಕ್ಕಳೇ' ಎಂದು ಹರಕೆಯನ್ನೀಯುತ್ತಿದ್ದರು ಅಯ್ಯನವರು.

ಅವರ ಹರಕೆ ನಮ್ಮಲ್ಲಿ ಒಂದು ದಿನ ಹೊಸ ಚೈತನ್ಯ ತುಂಬಿತು. ಅದು ನನಗೆ ಗೊತ್ತು. ತಮ್ಮ ಶಿವನಿಗೆ ಗೊತ್ತು. ಹಡೆದವರಿಗೆ ಗೊತ್ತು. ಏನದು ಗುಟ್ಟು ?

* * * *

ದೇವರ ಪೂಜೆಗೆ ಹೂದಿರಿಯುವ ಕಾರ್ಯ ನಾವೂ ಕೈಕೊಂಡೆವು. ನನಗಿಂತಲೂ ಶಿವನು ಮುಂದು. ಅವನೇ ಮುಂದಾದ.

ಸಿದ್ದಯ್ಯನವರು ಹಾಸಿಗೆಯಲ್ಲಿರಬಹುದು. ಇಲ್ಲವೆ ಸ್ನಾನ ಮಾಡಿರ ಬಹುದು. ಆದರೆ ಅವರು ಮನೆ ದಾಟಿ ಬರುವ ಮುನ್ನವೇ ನಾನೂ ಶಿವನೂ ತೋಟದಿಂದ ಹೂ ಆಯ್ದುಕೊಂಡು ಬಂದು ಮನೆಯ ಬಾಗಿಲ ಮರೆಯಲ್ಲಿ ನಿಂತು ಸಿದ್ದಯ್ಯನವರನ್ನು ನೋಡುತ್ತಿದ್ದೆವು.

ತಾಯಿ ತಂದೆಗಳಿಗೆ ಆಶ್ಚರ್ಯ. ಹರುಸ. ಸಿದ್ದಯ್ಯನವರಿಗೂ ಸೋಜಿಗ. ಸಂತಸ.

ದಿನವೂ ತುಂಬಿಬರುತ್ತಿದ್ದ ಸಿದ್ದಯ್ಯನವರ ಹೂವಿನ ಬುಟ್ಟಿ ಏಕೆ ಬರಿದಾಗಿ ಬರುತ್ತಿದೆ? ದಾಸಾಳ ಹೂವೆಲ್ಲಿ? ಮಲ್ಲಿಗೆಯ ಕಂಪೆಲ್ಲಿ? ಊರ

ಓಣಿಯ ತುಂಬ ಪರಿಮಳ ಸೂಸುವ ಸೇವಂತಿಗೆ ಎಲ್ಲಿ? ಬರಿ ಸೂಜಿಮಲ್ಲಿಗೆ ಕಾಣಿಸುತ್ತಿವೆಯಲ್ಲ!

ನಮ್ಮ ಮನೆಯ ದೇವರು ಸಂಪ್ರೀತಿಗೊಂಡನೆಂದು ಹೇಳಲೇ? ನಮ್ಮ ಬನಶಂಕರಿ ಸಂತೃಪ್ತಿ ಹೊಂದಿದಳೆಂದು ಹೇಳಲೇ? ನಮ್ಮ ಮನೆಯ ದೇಗುಲ ಸೊಬಗುವಡೆದಿದೆಯೆಂದು ಹೇಳಲೇ? ಹೇಳಬಾರದೇಕೆ? ಅದು ನಮ್ಮ ಭಕ್ತಿ.

ಬೆಳಗಿನಲ್ಲಿ ನಾವು ಎದ್ದುದು ತಾಯಿತಂದೆಗಳಿಗೆ ಗೊತ್ತು. ಹೂವಿನ ಬುಟ್ಟಿ ತುಂಬಿ ತಂದು ದೇವರನ್ನು ಪೂಜಿಸುತ್ತಿದ್ದುದೂ ಅವರಿಗೆ ಗೊತ್ತು. ದಾಸಾಳ, ಮಲ್ಲಿಗೆ, ಸೇವಂತಿಗೆ ಎತ್ತಿಕೊಂಡು ಬಂದುದು ತೋಟದ ಸಾಬಿಗೂ ಗೊತ್ತು. ಆದರೆ ಸಿದ್ದಯ್ಯನವರಿಗೆ ಗೊತ್ತಿಲ್ಲ ಈ ವಿಷಯ.

ಒಂದು ದಿನ ಶಿವನಿಗೆ ಹೇಳಿದೆ. ‘ತಮ್ಮ, ಅಯ್ಯನವರಿಗೆ ಒಂದಿಷ್ಟು ಹೂ ಬಿಡೋಣ. ಎಲ್ಲವನ್ನೂ ನಾವೇ ಆಯ್ದರೆ ಹೇಗೆ?

‘ನೀನು ಹೋಗು. ನಾನು ತರುತ್ತೇನೆ. ನಮ್ಮ ದೇವರ ಮುಂದೆ ಅವರ ದೇವರೇನು?’

‘ಹಾಗೆನ್ನಬೇಡ. ಮೇಲಿನ ಟೊಂಗೆಯ ಹೂವನ್ನಾದರೂ ಬಿಡು. ಬೆತ್ತದಿಂದ ಬಾಗಿಸಿ ಆಯ್ದುಕೊಳ್ಳುತ್ತಾರೆ.’

‘ನಿನ್ನ ಭಕ್ತಿ ನನಗೆ ಬೇಡಣ್ಣ. ನೀನು ಹೋಗು. ನಾನೊಬ್ಬನೇ ಎತ್ತುತ್ತೇನೆ.’

ಶಿವನು ಹಟಮಾರಿ ಎನ್ನಲೇ? ಅದು ಎಳೆಯ ಮನಸ್ಸು. ಹರುಷಗೊಂಡು ಗಾನ ಗೈಯುವ ತುಂಬಿಯ ಮನ ಅವನದು. ಅದಕ್ಕೇನು ಗೊತ್ತು ಚಂಪಕ ವನದ ಸೌಖ್ಯ? ಅದು ತುಂಬಿಯ ತಪ್ಪೇ? ಹಾಗಾದರೆ ದೇವ ದಂಡಿಸಲೇಕೆ?

*  *  *  *

ಸಿದ್ದಯ್ಯನವರು ಹೂವಿನ ಬುಟ್ಟಿಯಲ್ಲಿ ದಾಸಾಳ ಎಲೆ ತುಂಬಿ ಕೊಂಡು ನಡೆದಿದ್ದರು. ಅಪ್ಪ ಅದನ್ನು ನೋಡಿದರು. 'ತೋಟದಲ್ಲಿ ಹೂವೇ ಇಲ್ಲ ನೋಡಿರಿ. ಯಾರೋ ಒಂದೂ ಬಿಡದಂತೆ ಆಯ್ದಿರುತ್ತಾರೆ' ಎಂದರು ಸಿದ್ದಯ್ಯನವರು. ತಂದೆ ಮುಗುಳು ನಗೆ ನಕ್ಕರು. ಬಾಗಿಲ ಮರೆ ನಿಂತು ನಾನು ಅಡಗಿಕೊಂಡೆ; ಶಿವನೂ ಅಡಗಿಕೊಂಡ.

ಮನೆಗೆ ಬಂದ ಸಿದ್ದಯ್ಯನವರನ್ನು ಹಾಸಿ ಕುಳ್ಳಿರಿಸಿದರು. ಒಳಗಿನಿಂದ ಹೂವಿನ ಬುಟ್ಟಿ ತಂದು ಅವರ ಕೈಗಿತ್ತರು ಅಪ್ಪ. ಅಯ್ಯನವರಿಗೆ ಪರಮಾನಂದವಾಯಿತು.

'ಮಕ್ಕಳ ಭಕ್ತಿ ಹಿಗ್ಗಲಿ' ಎಂದರು ಅಯ್ಯನವರು.

'ಸಣ್ಣವರು' ಎಂದರು ಅಪ್ಪ.

'ನಾನೇ?' ಎಂದು ಶಿವ ಸಿಡಿಮಿಡಿಗೊಂಡ.

ನಾನು ಎಲ್ಲವನ್ನೂ ನಿರೀಕ್ಷಿಸಿದೆ. ಮೌನವಾಗಿ ನೋಡಿದೆ. ಈಗಲೂ ಮೌನವಾಗಿಯೇ ನೆನೆಯುತ್ತಿದ್ದೇನೆ. ಎಂಥ ನೆನಪು ಅದು !

ತೋಟದ ಸಾಬಿ ಮನೆಯ ಮುಂದೆ ನಗುತ್ತ ಹೋದ. ನನಗೆ ನಗು ಬಂದರೂ ಶಿವನಿಗೆ ನಗು ಬರಲಿಲ್ಲ. ಅರ್ಥ ಏನು?

ಸಿದ್ದಯ್ಯನವರು ಎಂದಿನಂತೆ ಹೂದಿರಿಯುವುದನ್ನು ಕಡಮೆ ಮಾಡಿ ದರು. ಶಿವನೂ ಕಡಮೆ ಮಾಡಿದ. ಏಕೆ? ಜೀವನದಲ್ಲಿ ಜಿಗುಪ್ಸೆಯೇನು? ಮುಪ್ಪು ಎಳೆತನ ದೇವನ ಕರೆಗೆ ತಲೆಬಾಗಿಸಿದವು.

* * * *

ನಾನು ಮೌನದಿಂದಲೇ ನೆನೆಯುತ್ತಿದ್ದೇನೆ. ಏನನ್ನು? ಹೂ ತೋಟದಲ್ಲಿ ತುಂಬ ಅರಳಿವೆ. ಅರಳಿದ ಹೂ ಬಾಡುತ್ತಿವೆ. ಬಾಡಿದ ಹೂ ಕಳಚುತ್ತಿವೆ.

ಸೇವಂತಿಗೆ ಪರಿಮಳ ಕೊಟ್ಟು ಪರಿಮಳ ಕೊಳ್ಳುತ್ತಿವೆ. ಮಲ್ಲಿಗೆ ಬಳ್ಳಿಯಲ್ಲಿ ಮೂಡಿ ಬಳ್ಳಿಯಲ್ಲೆ ಮುಳುಗುತ್ತಿವೆ.

ದೇವರು ಅರಿಯದವನಂತೆ ಸೇವೆ ಸ್ವೀಕರಿಸುತ್ತಿದ್ದಾನೆ. ತೋಟದ ಸಾಬಿಗೆ ಆ ಸೇವೆ ಗೊತ್ತು. ನನಗೆ ಗೊತ್ತು. ಹಡೆದವರಿಗೆ ಗೊತ್ತು.

ಒಂದು ದಿನ ಮುಂಜಾವಿನಲ್ಲಿ ಮನೆಯ ಮುಂದೆ ನಿಂತಿದ್ದೆ. ತಾಯಿ ಹೊಸ್ತಿಲಕ್ಕೆ ಕುಂಕುಮ ಹಚ್ಚುತ್ತಿದ್ದರು. ತಂದೆ ಶಾಲೆಯ ಕಾರ್ಯಕ್ಕೆ ನೆರವಾಗುತ್ತಿದ್ದರು. ತೋಟಕ್ಕೆ ಹೋಗುತ್ತಿದ್ದ ಸಾಬಿ ಅಪ್ಪನನ್ನು ಕಂಡು 'ಸಲಾಂ' ಮಾಡಿದ. ಅವನಿಗೆ ಏನೋ ನೆನಪಾಯಿತು. ಹೃದಯ ತಡೆಯಲಿಲ್ಲ. ಒಂದು ಮಾತು ಆಡಿದ. 'ತೋಟದಲ್ಲಿ ಹೂ ಉದುರಿ ಬೀಳುತ್ತಿವೆ, ಅಪ್ಪ' ಸಾಬಿಯ ಮಾತಿದು.

ಅದನ್ನು ಕೇಳುತ್ತಲೆ ಕಲ್ಲಾಗಿ ನಿಂತೆ. ಕುಂಕುಮ ಹಚ್ಚುತ್ತಿದ್ದ ತಾಯಿ ತಣ್ಣಗಾದರು. ಅಪ್ಪ ದುಃಖವದನರಾಗಿ ನಿಂತಿದ್ದರು. ಆಗ ಎಲ್ಲರ ಹೃದಯದಲ್ಲಿಯೂ ಒಂದು ಮಾತು ಅರಳಿ ನಿಂತಿತ್ತು.

ದೇವರ ಹೂ ದೇವರಿಗೆ !

# ಶೀಗೆ ಹುಣ್ಣಿಮೆಯ ದಿನ

" ಉಮಾಽಽ........ "

" ................ "

" ಏ, ಉಮಾಽಽ........ "

" ಬಂದೆ ಅಣ್ಣಾ " ಎಂದೆನ್ನುತ್ತಲೆ ಅಡುಗೆ ಮಾಡುತ್ತಿದ್ದ ತಂಗಿ ಮುಸುರಿಯಾದ ಕೈಗಳನ್ನು ಹಾಗೆಯೆ ಹಿಡಿದುಕೊಂಡು ಬಂದಳು.

" ನಾಳೆ ಶೀಗೆಯ ಹುಣ್ಣಿಮೆ ! "

" ಹೌದು. ಅದಕ್ಕೇನು ಮಾಡೋಣಣ್ಣಾ " ಎಂದು ಇಳಿದನಿಯಿಂದ ತಂಗಿ ಕೇಳಿದಳು. ಅವಳ ಉತ್ತರ ಕೇಳಿ ನನಗೆ ಆಶ್ಚರ್ಯವಾಯಿತು.

" ಊರಿನ ಜನರೆಲ್ಲ ತಮ್ಮ ತಮ್ಮ ಹೊಲಗಳಿಗೆ ಹೋಗಿ ಆನಂದದಿಂದ ಕಾಲ ಕಳೆದು ಊಟ ಮಾಡುವರು. ನಾವೂ ನಾಳೆ ಹೋಗೋಣವೇ ? " ಎಂದೆ.

" ಅವ್ವನನ್ನು ಕೇಳುತ್ತೇನೆ, ಅಣ್ಣ. ನಿನ್ನೆಯಿಂದ ಏಕೊ ಆಕೆ ಸಪ್ಪೆ ಮುಖ ಹಾಕಿಕೊಂಡೇ ಇರುವಳು. "

" ಹೋಗಲಿ. ನೀನು ಅಡುಗೆ ಮಾಡು. ನಾನೆಲ್ಲ ತಾಯಿಗೆ ಹೇಳುತ್ತೇನೆ. ಆ ಹಾಳು ನಗರಗಳಲ್ಲಿ ಕಾಲ ಕಳೆದು ಜೀವನವೆಲ್ಲ ರೋಸಿಟ್ಟು ಹೋಗಿದೆ. ನಾಯಿಕೊಡೆ ನಾಗರಿಕತೆಯ ನೆರಳಿನಲ್ಲಿ ಅಲೆದಾಡುವ ನಗರವಾಸಿಗಳ ಬದುಕನ್ನು ಏತಕ್ಕೆ ಹೋಲಿಸುವದಮ್ಮ ! ನಾಳೆ ಊಟಕ್ಕೆ ಹೊಲಗಳಿಗೆ ಹೋಗೋಣವೆಂದರೆ ತಾಯಿ ಬೇಡ ಅನ್ನಲಿಕ್ಕಿಲ್ಲ. "

" ಆಗಲಿ ಅಣ್ಣ " ಎಂದು ನುಡಿಯುತ್ತ ಉಮಾ ಒಳಗೆ ಹೋದಳು. ನಾನೂ ಅವಳನ್ನು ಹಿಂಬಾಲಿಸಿ ಹೋದೆ. ತಾಯಿಯನ್ನು ಕೇಳಿದೆ. ನನ್ನ

ಮಾತು ಅಲ್ಲಗಳೆಯಲಾರದೆ 'ಆಗಲಪ್ಪ' ಎಂದು ನುಡಿದರು ತಾಯಿ. ಅಂತೂ ಮರುದಿನ ಹೊಲಕ್ಕೆ ಹೋಗುವುದು ನಿಶ್ಚಯವಾಯಿತು.

* * * *

ಮನೆಯನ್ನು ಕಾಯುವುದಕ್ಕಾಗಿ ಅಮ್ಮನನ್ನು ಬಿಟ್ಟು ನಾವು ಬಂಡಿ ಹೂಡಿಕೊಂಡು ಹೊರಟೆವು. ಶೀಗೆ ಹುಣ್ಣಿಮೆಯ ಸಂಭ್ರಮ ಹಾದಿ ಹಾದಿಯಲ್ಲಿಯೂ ಸೂರೆಗೊಂಡಿತ್ತು. ಹುವ್ವು ಹುಲ್ಲು ಹಬ್ಬದುಬ್ಬಿನಲ್ಲಿ ಮೆರೆಯುತ್ತಿದ್ದವು. ಹಕ್ಕಿಗಳು ಸಂತೋಷದಿಂದ ಹಾಡುತ್ತಿದ್ದವು. ಉಮಾ ಹಕ್ಕಿಯ ಹಾಡಿನೊಂದಿಗೆ ತನ್ನ ದನಿಯನ್ನು ಬೆರಸುತ್ತಿದ್ದಳು. ರಸಿಕ ವ್ಯಕ್ತಿಯಂತೆ ನಾನೂ ಸೃಷ್ಟಿಯ ಸೊಬಗನ್ನು ನಿರೀಕ್ಷಿಸುತ್ತಿದ್ದೆ. ತಮ್ಮನೊಬ್ಬ ಗಾಡಿ ಹೊಡೆಯುವ ಆಳಿನೊಂದಿಗೆ ಕುಳಿತುಕೊಂಡು ದನಗಳನ್ನು ಒಳ್ಳೆ ಆನಂದದಿಂದ ಬೆದರಿಸುತ್ತಿದ್ದನು. ಅಪ್ಪ ಹಿಂದಿನಿಂದ ನಡೆದುಕೊಂಡು ಬರುತ್ತಿದ್ದರು. ತಾಯಿ ನಮ್ಮ ಪಕ್ಕದಲ್ಲಿಯೇ ಕುಳಿತುಕೊಂಡು ಏನನ್ನೊ ಆಲೋಚಿಸುತ್ತಿದ್ದರು. ಆಗ ನಾನು ಮಾತಿಗೆ ಸುರುವು ಮಾಡಿದೆ.

" ಅಪ್ಪ, ಪಟ್ಟಣದಲ್ಲಿ ಇಂತಹ ನೋಟ ಏನು ಕೊಟ್ಟರೆ ಸಿಕ್ಕೀತು? "

ತಾಯಿ ಮಾತನಾಡಲಿಲ್ಲ.

" ಇಂತಹ ಹಸಿರು ಮುರಿಯುವ ಹೊಲಗಳನ್ನು ನಾನೆಲ್ಲಿಯಾದರೂ ಕಂಡರೆ, ಕೂಡಲೆ ಊರಿನ ನೆನಪಾಗುವುದು! "

ಮತ್ತೂ ತಾಯಿ ಮಾತನಾಡಲಿಲ್ಲ. ಅವರ ಮುಖವನ್ನು ನೋಡುತ್ತ ಮತ್ತೆ ಅಂದೆ.

" ಹಳ್ಳಿಯವರು ರಸಿಕರು ಹೌದವ್ವ. ಹಗಲಿರುಳೂ ದುಡಿಯುವರು. ದುಡಿಯುತ್ತ [illegible] ಸುವರು. ನಿನ್ನೆ ದುಃಖವೊದಗಿದ್ದರೆ ಇಂದು ಅದನ್ನು ಮರೆತುಬಿಟ್ಟು ಹೊಸ ಜೀವನವನ್ನು ತುಂಬಿಕೊಂಡು ಆನಂದದಿಂದಿರುವರು. "

"ಅವರವರ ಕಷ್ಟ ಅವರಿಗೇ ಗೊತ್ತಪ್ಪ!" ಎಂದು ನಿಡಿದುಸಿರು ಹಾಕಿದರು ತಾಯಿ.

"ನಿನ್ನದೂ ಒಂದು ತತ್ವ ನೋಡಮ್ಮ!"

ತಂಗಿ ನಡುವೆ ಬಾಯಿ ಹಾಕಿ 'ಅಣ್ಣಾ' ಎಂದಳು. ಆಗ ತಾಯಿ ಮತ್ತೂ ಯೋಚನೆಯಲ್ಲಿಯೇ ತೊಡಗಿದರು. ಬಂಡಿ ಹಾಗೆಯೆ ಮುಂದು ವರೆಯಿತು. ಎರಡೂ ಕಡೆ ನಿಲುವು ಕಟ್ಟಿ ಬೆಳೆದ ಜೋಳದ ಹೊಲಗಳ ನಡುವೆ ಹಾಯ್ದು ಹೊಲವನ್ನು ಮುಟ್ಟಿದೆವು.

*  *  *  *

ಹೊಲದ ನಡುವೆ ನೀಳವಾಗಿ ಬೆಳೆದಿದ್ದ ಬನ್ನಿಯ ಮರದೆಡೆಯಲ್ಲಿ ಬಂದು ಬೀಡು ಬಿಟ್ಟೆವು. ಕೆಲ ಹೊತ್ತಿನ ಮೇಲೆ ಪೂಜೆ ನಡೆಯಿತು. ಉಮಾ ಪೂಜೆ ಮಾಡುತ್ತ ನುಡಿದಳು.

"ಇವರು ಪಾಂಡವರಣ್ಣ!"

"ಮತ್ತೆ?"

"ಇವನು ಕಳ್ಳ"

"ಆಯಿತು ಮುಂದೆ........?"

"ವನವಾಸದ ದಿನಗಳಲ್ಲಿ ಪಾಂಡವರು ಜೋಳದ ಹೊಲದಲ್ಲಿ ಕುಳಿತುಕೊಂಡು ಅಡುಗೆ ಮಾಡುತ್ತಿದ್ದರಂತೆ. ಆಗ ಕಳ್ಳ ಬಂದು ನೋಡಿದ" ಎಂದು ನುಡಿಯುತ್ತ ಐದು ಕಲ್ಲುಗಳನ್ನು ಸಾಲಾಗಿಟ್ಟು ಅವುಗಳಿಗೆ ಸುಣ್ಣ ಕೆಮ್ಮಣ್ಣನ್ನು ಉಮಾ ಹಚ್ಚತೊಡಗಿದಳು.

"ಅದೇನೊ ನಿನ್ನ ಹಾಳು ಕತೆ. ಸ್ವಲ್ಪದರಲ್ಲಿ ನಿನ್ನ ನೇಮಗಳನ್ನು ಮುಗಿಸಿ ನಮಗೆ ಎಡೆ ಮಾಡಬಾರದೆ ಉಮಾ? ಹಸಿವೆಯಾಗಿದೆ" ಎಂದೆ.

ಪೂಜೆ ಮುಗಿಯಿತು. ಎಲ್ಲರೂ ಅಲ್ಲಲ್ಲಿ ಕುಳಿತೆವು. ತಂಗಿ ಎಡೆ ಮಾಡಹತ್ತಿದಳು. ಜಿಪ್ಪ ಚಿಕ್ಕಿಯು ಸಾಮಾನುಗಳನ್ನು ಸಂಪಡಿಸುತ್ತ

ಕುಳಿತಿದ್ದರು. ತುಸು ಹೊತ್ತಿನ ನಂತರ ಎಡೆ ಮಾಡಿದ ಮೇಲೆ ತಂಗಿಗೆ ನಮ್ಮೊಡನೆ ಊಟ ಮಾಡಲು ಹೇಳಿದೆ. ಆದರೆ ಅವಳು ಒಪ್ಪಲಿಲ್ಲ. ನಮ್ಮ ಊಟ ಹಾಗೆಯೆ ಸಾಗಿತ್ತು. ಉಮಾ ಒಮ್ಮೊಮ್ಮೆ ನಮಗೆ ಅವಶ್ಯವಿರುವ ಪದಾರ್ಥಗಳ ಕಡೆಗೆ ನೋಡುತ್ತ, ಇನ್ನೊಮ್ಮೆ ಏನಾದರೂ ಮಾತನಾಡುತ್ತಾರೆಂದು ತಿಳಿದು ನಮ್ಮ ಮುಖಗಳನ್ನು ನೋಡುತ್ತ ಕುಳಿತಿದ್ದಳು. ಊಟ ಶಾಂತವಾಗಿ ನಡೆದಿತ್ತು. ಆಗ ಒಮ್ಮಿಂದೊಮ್ಮೆಲೆ ಜೋಳದ ಗರಿಗಳನ್ನು ಸೀಳುತ್ತ ಗಾಳಿಯೊಂದಿಗೆ ಅಲೆಯಲೆಯಾಗಿ ರೋದನ ಸ್ವರವು ನಾವು ಊಟ ಮಾಡುವಲ್ಲಿಗೆ ಬಂದಿತು. ನಾವೆಲ್ಲ ಬೆಚ್ಚಿ ಬಿದ್ದೆವು.

" ಉಮಾ, ಅವ್ವ ಎಲ್ಲಿ ? " ಎಂದು ಆತುರದಿಂದ ನುಡಿದೆ.

" ಈಗ ಇಲ್ಲಿಯೇ ಹೋದಳಲ್ಲ ! "

ಮುಸುರೆ ಕೈಯಿಂದ ಹಾಗೆಯೆ ಎದ್ದು ಧ್ವನಿ ಬಂದ ಕಡೆಗೆ ಧಾವಿಸಿದೆ. ಸಮೀಪಕ್ಕೆ ಹೋದಂತೆ ಭೋರಿಡುತ್ತ ಹಾಡಿಕೊಂಡು ಅಳುವ ಮಾತುಗಳು ಕಿವಿಗೆ ಅಪ್ಪಳಿಸಿದವು. ಮತ್ತೂ ಸಮೀಪಿಸಿದೆ.

" ಹೋದ ಸಾರೆ ನನ್ನ ಕರಕೊಂಡು ಉಂಡ ನೀನು ಈ ವರ್ಷ ಮಣ್ಣಿಗೆ ಮರೆಯಾದೆಯಾ ? ಮುಂದೆ ನೀ ಬೆಳೆದು ಮಕ್ಕಳ ತಂದೆಯಾಗಿ ಬಾಳತೀಯೆಂಮು ತಿಳಿದಿದ್ದೆನಪ್ಪ ! ನಿನ್ನ ಮುಂದೆ ಸಂತೋಷದಿಂದ ಕಣ್ಮುಚ್ಚಬೇಕೆಂದು ಬೇಡಿಕೊಂಡಿದ್ದ ನನ್ಕಿಂದೆಯೇ ನೀ ಹೋದೆಯಾ ? ಈಗ ನಿನ್ನ ಬಿಟ್ಟ ನಾ ಹ್ಯಾಂಗ ಊಟ ಮಾಡಿ ದುಃಖ ಹಿಂಗಿಸಲಿ ಮಗನೇ....?" ಎಂದು ಶಿವಪ ಗೋರಿಯ ಮೇಲೆ ಬೆಳೆದಿದ್ದ ಹುಲ್ಲನ್ನು ತಬ್ಬಿಕೊಂಡು ಅಳುತ್ತಿದ್ದರು ನನ್ನ ತಾಯಿ.

' ಅವ್ವ........ತಾಯೀ........ ' ಎಂದು ಓಡಿ ಹೋಗಿ ಅವರ ಹತ್ತಿರ ನಿಂತೆ. ತಾಯಿ ಇನ್ನಷ್ಟೂ ರೋದಿಸತೊಡಗಿದರು. ಆ ರೋದನ ಎಳೆಯ ಮನಸ್ಸಿನ ಮೇಲೆ ಕಾಯ್ದ ಕಬ್ಬಿಣದಿಂದ ಬರಿ ಕೊಟ್ಟಂತಾಯಿತು. ಬಂದ

ದುಃಖವನ್ನು ನುಂಗಿಕೊಂಡು ‘ ಇದೇನು ತಾಯೀ, ನಾವಿಲ್ಲವೇ ? ’ ಎಂದೆ. ತಾಯಿ ನನ್ನ ಮಾತು ಕೇಳದೆ ನೆಲವನ್ನಮುಕುತ್ತ ಮತ್ತಷ್ಟು ದುಃಖ ದುಂಬಿ ರೋದಿಸತೊಡಗಿದರು.

ಅಷ್ಟರಲ್ಲಿ ಎಲ್ಲರೂ ಬಂದರು. ತಾಯಿಯ ದುಃಖ ಜ್ವಾಲೆ ಕಮರಿತು. ಎಲ್ಲರ ಮುಖದಲ್ಲಿಯೂ ಶೋಕದ ಕುರುಹು ಕೂಗು ಹಾಕುತ್ತಿತ್ತು. ಮರೆತು ಆರು ತಿಂಗಳಾಗಿ ಹೋಗಿದ್ದ ಶಿವನ ಸ್ವರೂಪವನ್ನು ಸ್ಮೃತಿ ಪಥದಲ್ಲಿ ಮೂಡಿಸಿಕೊಂಡು ಜಲಾಂಜಲಿಯನ್ನಿತ್ತು ತಿರುಗಿ ಬಂದೆವು. ಊಟ ಸುಖವಾಗಿ ಸಾಗಲಿಲ್ಲ. ಮನೆಯ ಕಡೆಗೆ ಮುಖ ಮಾಡಿಕೊಂಡು ಬರುವಂದು ಸೃಷ್ಟಿಯ ಚೆಲುವು ಕರಾಳವಾಗಿ ಕಾಣ ತೊಡಗಿತು ಹಕ್ಕಿಯ ಕೊರಲ ಗಾನ ರೋದಿಸುವಂತೆ ಕೇಳ ಬಂದಿತು.

ಹೀಗೆ ಹುಣ್ಣಿಮೆಯ ಪಯಣ ಸರಸವಾದೀತೆಂದು ತಿಳಿದಿದ್ದೆ. ಆದರೆ ವಿರಸವಾಯಿತು !

# ಜೀವನ ದ್ರಷ್ಟಾರ

ಮರೆವು ಮಾನವನಿಗೊಂದು ದಿವ್ಯ ಮಂತ್ರ. ಸಾವ ಚಿಂತೆ ಎಲ್ಲರಿಗೂ ಎದೆದಟ್ಟಿ ನಿಂತರೆ ಮಾಡುವುದೇನು? ಜಗತ್ತು ಏನಾಗಬಲ್ಲುದು? ಆದರ ವಿಚಾರ ನಮಗಿಲ್ಲ. ನಾಳೆ ಸಾವು ನಮಗಾಗಿ ಕಾಯ್ದುನಿಂತಿದ್ದರೂ ಅದನ್ನು ಮರೆತು ಬಿಟ್ಟು ಮನೆ ಕಟ್ಟುವ ಕಾರ್ಯ ಕೈಕೊಳ್ಳುತ್ತೇವೆ. ನೀರ ಮೇಲೆ ಹರಗೋಲು ಸಾಗಿಸುವ ಅಂಬಿಗ ಮುಂದೆ ಬಂದು ಏಟು ಕೊಡುವ ಬಂಡೆಗಲ್ಲುಗಳ ವಿಚಾರ ಮಾಡದೆ ಹರಗೋಲು ತನ್ನದೆಂದು ಹೇಳುತ್ತಾನೆ. ಊರ ಮುಂದಿನ ಹೊಲ, ಹಳ್ಳದ ಮೇಲಿನ ಗಿಡಗಳು, ದಿನ್ನೆಯ ಮೇಲೆ ಮೇಯುವ ದನಕರು, ಇವುಗಳ ಒಡೆತನಕ್ಕಾಗಿ ನಾಡಾಡಿ ಜನ ಹೋರಾಡುತ್ತದೆ. ಇಂತಹ ಧೈರ್ಯ ದೇವತೆಗಳಲ್ಲಿಯೂ ಇರಬಹುದೇನು?

ನಮ್ಮೂರಿನ ಜನ ಶಿಗ್ಗಾವಿ ಸಂತೆಗೆ ಹೋಗುವ ದಿನ ನನ್ನೊಡನೆ ಬನ್ನಿ. ಮರೆವು ಅವರಲ್ಲಿ ಹೂಡುವ ಆಟವನ್ನು ನೀವು ಉಸಿರು ಉಸಿರಿಗೂ ಕಾಣುವಿರಿ. ಗಂಡಸರು, ಹೆಂಗಸರು, ಹಿರಿಯರು, ಕಿರಿಯರು ದಾರಿಯುದ್ದಕ್ಕೂ ಜೀವನ ಸಂತೆಯ ವಿಚಾರ ಮಾಡುತ್ತಿರುತ್ತಾರೆ. ಕಿರಿಯರ ಮುಖದಲ್ಲಿ ತೋರುವ ಮುಗ್ಧಭಾವದಲ್ಲಿ ಬಾಳಿನ ಆಸೆ-ಅಣಕುಗಳು, ಮರೆವು-ಮಾಟಗಳು ಹೊಂಚು ಹಾಕಿರುವುದನ್ನು ನೀವು ಗಮನಿಸುವಿರಿ. ಅಯ್ಯೋ ಎಂದು ಮರುಗುವಿರಿ. ಹಿರಿಯರ ನೋಟದಲ್ಲಿ ಮರೆವಿನ ಹಣ್ಣು ಬಿರಿಯಲಿರುವುದನ್ನು ಕಂಡು ಮರುಕ ಹುಟ್ಟಬಹುದಾದರೂ ಬಿರಿತ ಹಣ್ಣಿನಿಂದ ಬೀಜ ಉದುರಿ ಬಿದ್ದು ಬೀಜ ಪಡೆಗೆ ಕಾರಣವಾಗುವದೆಂಬುದನ್ನು ಅರಿತುಕೊಂಡು ನಿಮ್ಮನ್ನು ನೀವೆ ಸಂತೈಸಿಕೊಳ್ಳುವಿರಿ. ಮರೆವಿನ ಮಾಟ ಎಷ್ಟು ಬಲಶಾಲಿ!

ಸಂತೆಯ ಮಂದಿ ವಿಚಾರದಲ್ಲಿ ತೇಲಿ ಹೋಗುತ್ತಿರುತ್ತಾರೆ. ಮೇಲೆ ಬಾನಿನಿಂದ ಉರಿವ ಕಿರಣಗಳನ್ನು ಸೂರ್ಯ ತೂರುತ್ತಿರುತ್ತಾನೆ. ಕೆಳಗೆ ಮೃಗಜಲ ಕಣ್ ಮುಚ್ಚಾಟವಾಡುತ್ತಿರುತ್ತದೆ. ಪಥಿಕರು ಬಿಸಿಲಿಗೆ ಬೆಂದು

ಹೋಗುತ್ತಾರೆ; ಉಮ್ಮಳಿಸಿ ಬಿಡುತ್ತಾರೆ. ಎಲ್ಲರ ಕಣ್ಣೂ ದೂರದ ಮರದಡಿಯಲ್ಲಿ; ದಣಿದು ಉಸ್ಸೆಂದು ಬೀಡು ಬಿಡಲೆಳಸುವ ದೂರದ ಮರದಡಿಯಲ್ಲಿ.

ಅದು ಬೇವಿನ ಮರ. ಅದರ ಅಡಿಯಲ್ಲಿ ತಂಗಿ ಬಿಸಿಯುಸಿರ ನೀಗಿ ಮೆಯ್ಮನ ತಂಪಾಗಿರಿಸಿಕೊಳ್ಳುವ ನಮ್ಮೂರ ಸಂತೆ ಮಂದಿಯ ಬಾಯಿಂದ ಆ ಗಿಡದ ಮೇಲ್ಮೆಯನ್ನು ಅರಿತುಕೊಳ್ಳಬೇಕು. ಕಂಡ ಕಲ್ಲನ್ನು ಕುರಿತು ಹಾಡುವ ಜನ, ನೆಳಲು ಕೊಟ್ಟ ಮರವನ್ನು ಕುರಿತು ಮನ ಬಿಚ್ಚಿ ಹಾಡುವ ಜನ ಅಲ್ಲಿ ಕುಳಿತಿರುತ್ತಾರೆ. ಕುಳಿತು ದಣಿವ ನೀಗಿಕೊಂಡು ಹೊರಟು ಹೋಗುತ್ತಾರೆ. ಹೋಗುವವರು, ಬರುವವರನ್ನೆಲ್ಲ ಆ ಗಿಡ ನೋಡುತ್ತದೆ. ನೋಡಿ ಏನೋ ವಿಚಾರ ಮಾಡುತ್ತದೆ. ವಿಚಾರ ಮಾಡಿ ಸಲಹೆ ಕೊಡುತ್ತದೆ. ಅದರ ಸಲಹೆಗೆ ಕಿವಿಗೊಡುವ ಜನ ಒಬ್ಬರೂ ಇಲ್ಲ. ಮರೆವು ಮೋಹದ ಮಾಟವನ್ನೆಸಗುವಾಗ ಜನತೆಗೆ ಇನ್ನೇತರ ಚಿಂತೆ?

ಬೇವಿನ ಮರ ಎಂದು ಹೇಳಿದೆನಲ್ಲವೆ? ಸಂತೆಯ ಜನಕ್ಕೆ ಅದು ಬೇವಿನ ಮರವಲ್ಲ; ಸಂತೆಯ ಮರ. ಆ ಹೆಸರು ಅದಕ್ಕೆ ಬಿದ್ದು ಹೋಗಿದೆ. ಸಂತೆಯ ಮಂದಿ ಅದೇ ಹೆಸರಿನಿಂದ ಕರೆಯುತ್ತಾರೆ. ಆ ಹೆಸರನ್ನೇ ಹಿಡಿದುಕೊಂಡು ಮರ ಈಗಲೂ ಬಾಳುತ್ತಿದೆ. ಎಲ್ಲಿಯ ವರೆಗೆ ಬಾಳುತ್ತದೆ ಎಂಬುದನ್ನು ನಾನು ಹೇಗೆ ಹೇಳಲಿ! ಅದರ ಹುಟ್ಟು, ಅದರ ಸಾವು ಅದಕ್ಕೆ ಗುರುತಿರಬೇಕು. ಇಲ್ಲದಿದ್ದರೆ ಅಷ್ಟೊಂದು ಚೇತೋಹಾರಿಯಾಗಿ ಸಂತೆಯ ಮಂದಿಗೆ ಅದು ಪರಿಣಮಿಸಲೇಕೆ? ತಲೆಯ ಮೇಲೆ ಬುಟ್ಟಿ ಇಟ್ಟುಕೊಂಡು ನಡೆದಿರುವ ಹೆಣ್ಣು ಮಕ್ಕಳಿಗೆ ಕಿವಿಗುಟ್ಟು ಕೊಡುವ ಮರಕ್ಕೆ ಮರೆವಿನ ಗುಟ್ಟು ತಿಳಿದಿರಲೇ ಬೇಕು. ಹೆಗಲ ಮೇಲಿನ ಚೀಲ ಇಳಿಬಿಟ್ಟು ಉಸ್ಸೆಂದು ಕುಳಿತ ಗಂಡಸರಿಗೆ ಮರುಕ್ಷಣದಲ್ಲಿ ಉತ್ಸಾಹ ತುಂಬಿಸಿ ಮುಂದಕ್ಕೆ ಕಳುಹಿಸುವ ಆ ಮರಕ್ಕೆ ಆಗು-ಹೋಗುಗಳು ಗೊತ್ತಿರದೆ ಏನು? ಹಿಂದು-ಮುಂದನ್ನು ಅರಿಯದ ಎಳೆಯರಿಗೆ ಹಿಂದಿನ ನೋವನ್ನು ಮರೆಸಿಬಿಟ್ಟು ·ಮುಂದಿನ ಚೆಲುವನ್ನು ತೋರಿಸಿ ಕೊಡುವ ಸಂತೆಯ ಮರಕ್ಕೆ ನಾನು ಯಾವ ಹೆಸರಿಡಲಿ? ಸಂತೆಯ ಮರವೆಂದೆ? ಸಣ್ಣ ಮಾತದು. ಮರೆವೆಯ ಮರವೆ? ನನಗೆ ಗೊತ್ತಾಗದು. ಹಾಗಾದರೆ ಮತ್ತೇನು?

*    *    *    *

ಸಂತೆಗೆ ಊರ ಜನ ಹೊರಟಿತ್ತು. ಸಾಕಷ್ಟು ಜನ ಈಗಾಗಲೆ ಹೋಗಿದ್ದರು. ಗೌಡರ ಬಾವಿಯಿಂದ ಜಳಕ ಮಾಡಿಕೊಂಡು ತಿರುಗಿ ಬರುವಾಗಲೇ ಸಂತೆಗೆ ಮಂದಿ ಹೋಗುವುದನ್ನು ಕಂಡೆವು. ಮನೆಗೆ ಬಂದು ಮುಟ್ಟುವಾಗಲೆ ನಮಗೂ ಸಂತೆಯ ವ್ಯಾಪಾರ ಕಾಯ್ದುಕೊಂಡು ನಿಂತಿತ್ತು.

'ನೀವಿಬ್ಬರೂ ಈ ದಿನ ಸಂತೆಗೆ ಹೋಗಿರಿ' ಎಂದು ಅಪ್ಪ ನನಗೆ ಶಿವನಿಗೆ ಹೇಳಿದರು. ಒಮ್ಮೆಲೆ 'ಹೂಂ' ಎಂದೆವು.

ಊಟ ಮಾಡಿ ಕೈಯಲ್ಲಿ ಚೀಲ ಹಿಡಿದುಕೊಂಡು ಅಪ್ಪ ಕೊಟ್ಟ ರೊಕ್ಕವನ್ನು ಮುಚ್ಚಿಟ್ಟುಕೊಂಡು ಮನೆ ಬಿಟ್ಟೆವು. ಕೈ ಬೀಸುತ್ತ ಸಾಗಿದೆವು. ಸೂರ್ಯನ ಝಳ ಮೈಗೆ ತಾಕುತ್ತಿದ್ದರೂ ಹೊಸ ಹುರುಪಿನಿಂದ ಮುಂದುವರೆದೆವು. ಮೃಗಜಲ ಬೆಂಬತ್ತಿ ಎರಳೆ ಎಲ್ಲಿಯವರೆಗೆ ಹೋದಾವು!

ಬಾಯಿ ಆರಿತು. ಮನ ಬತ್ತಿತು. ಕಾಲು ನೊಂದವು. ಸಂತೆಯ ಮರದಡಿಯಲ್ಲಿ ಬಂದು ತಂಗಿದೆವು. ಶಿವನಿಗಿಂತಲೂ ನನಗೆ ಮರೆವು ಹೆಚ್ಚು. ಆತನಿಗೆ ಮರೆವಿನ ಗುಟ್ಟು ತಿಳಿದಿತ್ತೇನೋ!

'ಎಷ್ಟು ತಂಪೋ ಇದು?' ಎಂದೆ.

'ಹೌದಣ್ಣ!' ಶಿವನು ಹೇಳಿದ.

'ನೀನು ಹೀಗೆ ಕುಳಿತಿರು. ಒಂದಿಷ್ಟು ಜೊಂಪು ಹಾಕುತ್ತೇನೆ.'

'ಹಾಗಾದರೆ ಸಂತೆ?'

'ಸಂತೆಯು ಬಿಟ್ಟೆ ಈಗಾಗಲೇ ಸುರುವೇನೊ? ಸ್ವಲ್ಪ ವಿರಮಿಸ ಬಾರದೇ?'

ನನ್ನ ಮಾತಿಗೆ ತಮ್ಮ ಸುಮ್ಮನಾದ. ನನಗೆ ಸಮ್ಮತಿ ಸಿಕ್ಕಿತು. ಹಾಗೆಯೆ ಅಡ್ಡಾಗಿ ಬಿಟ್ಟೆ. ಬೇವಿನ ಮರದ ತಂಪು. ಸಂತೆಯ ಮರದ ಸಹವಾಸ. ಮರೆವೆಯ ಮರದ ಸಲಹೆ. ತಂಗಾಳಿ ಇತ್ತು. ಹಕ್ಕಿಗಳ ಹಾಡಿತ್ತು. ಜಿರಂಗಿಗಳ ಚೀತ್ಕಾರವಿತ್ತು. ಮತ್ತೇನೊ ನೆರವಾಗಿ ಬಂದಿತು. ಸಂತೆಯ ಚಿಂತೆ ಮರೆತು ಬಿಟ್ಟೆ. ಇನ್ನೊಂದು ಲೋಕದಲ್ಲಿ ಇದ್ದೆ. ನೋವಿಲ್ಲ. ಚಿಂತೆಯಿಲ್ಲ. ದಣಿವಿಲ್ಲ. ದಾಹವಿಲ್ಲ. ಯಾವ ಮಾಟದ ಜಗತ್ತು ಅದು?

ನನ್ನ ಹೊಸ ಜಗತ್ತಿನಲ್ಲಿ ಉಯ್ಯಾಲೆಯಾಡುತ್ತಿದ್ದೆ. ಆಗ ತಮ್ಮ ಶಿವ ಜಗ್ಗಿ ಎಬ್ಬಿಸಿದ.

' ಅಣ್ಣಾ, ಸಂತೆಗೆ ಹೋಗಬೇಕು, ಏಳು ? '

' ತಡಿಯೊ. ಅವಸರ ಬೇಡ. '

' ಹೊತ್ತಾಗಿದೆ. ಕೈವಾರು ಹೊತ್ತಿದೆ. '

' ಇರಲಿ ಬಿಡು. ಹೋಗೋಣಂತೆ. '

' ಹೊತ್ತಾಗಿದೆ. ಏಳಣ್ಣಾ ? '

' ಏನು ಕಾಟ ಕೊಡುತ್ತಾನೊ ಇವನು ? ' ಎಂದು ಕಣ್ಣು ಉಜ್ಜುತ್ತ ಎದ್ದು ಕುಳಿತೆ. ಮೇಲೆ ಹಕ್ಕಿ ಹಾಡಿತು. ಮರೆವೆಯ ಹಾಡು ಹಾಡಿತು. ತಿಳಿವಿನ ತತ್ವ ಕೂಗಿತು. ಅರಿವು ಬಂದಿತು. ಮುಂದಕ್ಕೆ ತಮ್ಮ, ನಾನೂ ಸಾಗಿ ಹೋದೆವು. ಸಂತೆಯ ಮರ ನಮ್ಮನ್ನೇ ನೋಡುತ್ತಿತ್ತು. ಅದಕ್ಕೆ ಮರೆಯಾಗಿ ನಾವು ಹೊರಟು ಹೋದೆವು.

* * * *

ಕಾಲನಿಗೆ ಯಾರ ಗುಲಾಮಗಿರಿ ? ಯಾರ ಹಂಗು ?

ಶಿಗ್ಗಾವಿಯ ಮೋಟರು ನಿಲುದಾಣದಲ್ಲಿ ಇಳಿದ ಕೂಡಲೆ ಈ ಮಾತು ನನಗೆ ಗಪ್ಪನೆ ನೆನಪಾಯಿತು. ವಿಚಾರದ ಹೊಯ್ದಾಟದಲ್ಲಿ ನುಗ್ಗು ನುರಿಯಾಗುತ್ತ ಊರ ಕಡೆ ಹೊರಟು ಬಂದೆ.

ಬಿಸಿಲು ' ಹೊಯ್ ' ' ಹೊಯ್ ' ಎನ್ನುತ್ತಿತ್ತು. ಮುಖದ ತುಂಬ ನೀರು ಇಳಿಯುತ್ತಿತ್ತು. ಮೈ ತುಂಬ ಉಸಿರು ಹೊಮ್ಮುತ್ತಿತ್ತು. ಸಂತೆಯ ಮರವನ್ನು ನೆನೆಯುತ್ತ ಓಡಿ ಓಡಿ ಬಂದೆ. ಅದೂ ನನ್ನ ದಾರಿಯನ್ನೇ ನೋಡುತ್ತಿತ್ತು.

ಸಾಮಾನು ಇಳಿಸಿ ಉಸ್ಸೆಂದು ಕುಳಿತೆ. ಕುಳಿತಂತೆಯೆ ಜೊಂಪು ಜಾರಿ ಬಂದಿತು. ಸಂತೆಯ ಹೋರಾಟ ಕಣ್ಣೆದಿರಿಗೆ ಬಂದಿತು.

‘ ಅಣ್ಣಾ, ಎಷ್ಟೊತ್ತು ಮಲಗೋದು ? ’

‘ ಛೇ. ಮತ್ತೆ ಬಂದಿಯಾ ? ’

‘ ಹೌದು. ಎದ್ದೇಳು. ಹೋಗೋಣ. ’

‘ ಸುಮ್ಮನಿರಪ್ಪ, ಸುಮ್ಮನಿರು. ’

‘ ಏಳಬಾರದೆ ? ಹೊತ್ತಾಗುತ್ತದೆ ? ’

‘ ಎಲ್ಲಿಗೆ ? ’

‘ ಸಂತೆ ಮುಗಿದಿದೆ. ಹೋಗೋಣ ಏಳು. ’

‘ ಸಂತೆಗೆ ಹೋಗುವಾಗಲೂ ಹೀಗೆಯೆ. ಮುಗಿದ ಮೇಲೂ ಇದೇನು ಕಾಟ ? ’

‘ ಊರು ಮುಟ್ಟ ಬೇಡವೆ ? ’

‘ ಅದಕ್ಕೇಕೆ ಆತುರ ? ’

‘ ಬೇಗನೆ ಹೋದರಾಯಿತು. ನಮ್ಮ ಕರ್ತವ್ಯ ಮುಗಿದಂತಾಗುತ್ತದೆ.

‘ ಕರ್ತವ್ಯವಂತೆ, ಕರ್ತವ್ಯ ! ಎಂಥದೊ ಅದು ? ’

‘ ಇರಲಿ. ಏಳಣ್ಣಾ. ಸಂತೆ ಮುಗಿದಿದೆ. ಲೆಕ್ಕ ಒಪ್ಪಿಸೋಣ. ’

‘ ಯಾವ ಲೆಕ್ಕ ? ’

‘ ಕಣ್ಣು ತೆರೆಯಣ್ಣ ! ನಿದ್ದೆಯಲ್ಲಿಯೇ ಮಾತನಾಡುತ್ತೀಯಲ್ಲ ! ’

‘ ಕಣ್ಣು ತೆಗೆ ಎಂದರೆ........? ಸುಮ್ಮನಿರಬಾರದೇ ? ’

‘ ಏಳು ಅಣ್ಣ, ಏಳು. ಎಚ್ಚರಾಗು ? ’

‘ ನಿಲ್ಲು, ಶಿವನೆ ! ಅವಸರ ಮಾಡಬೇಡ. ’

‘ ನಿದ್ದೆಯ ಮರೆವಿನಿಂದ ಏಳು, ಅಣ್ಣ ! ’

‘ ಮರೆವು........? ಎಲ್ಲಿದೆ ? ’

‘ ನನಗೆ ಸಾಕಾಯಿತು. ಒಬ್ಬನೇ ಹೊರಡುತ್ತೇನೆ, ಅಣ್ಣ ' ’

‘ ಆ್ಹ ! ’

‘ ನಾನು ಹೋಗುತ್ತೇನೆ. ’

‘ ಎಲ್ಲಿಗೆ ? ’

‘ ಊರಿಗೆ ! ’

‘ ಇಷ್ಟು ಬೇಗನೆ ? ’

‘ ಹೌದು. ಸಂತೆ ಮುಗಿದಿದೆ. ’

‘ ಅದಕ್ಕೇನೆ ನಿಲ್ಲು........ ! ’

‘ ಕೆಲಸ ಮುಗಿದಿದೆ. ’

‘ ಛೆ ! ’

‘ ಮರೆವಿನಿಂದ ಏಳು ! ’

‘ ಛೆ........ ಮರೆವು........! ’

‘ ನಾನು ಹೊರಟೆ....... ’

‘ ಬೇಡ. ಎದ್ದೆ. ಶಿವನೇ ಎದ್ದೆ. ’

‘ ಹೋದೆ........ ಇಗೋ ಹೋದೆ. ’

‘ ಶಿವನೇ, ಬೇಡ. ಇದೋ ಎದ್ದೆ ! ’

ಕಣ್ಣು ತೆಗೆದೆ. ರೆಪ್ಪೆಗುಂಟ ನೀರು ಹರಿಯುತ್ತಿತ್ತು. ಅತ್ತಿತ್ತ ನೋಡಿದೆ. ಸಂತೆಯ ಜನವಿಲ್ಲ. ಶಿವನಿಲ್ಲ. ಹಕ್ಕಿ ಗಾನವಿಲ್ಲ. ಏನಿದು ? ಶಿವನೇ, ಏನಿದು ? ಏನು ನಿನ್ನ ಆಟ ?

ಸತ್ತ ತಮ್ಮ ಶಿವನ ನೆನಹು ಎದೆಯ ಮೇಲೆ ಬಂದು ಕುಳಿತಿತು. ಮರೆವೆಯ ಮಾಟ ಕಣ್ಮುಂದೆ ಕುಣಿಯುತ್ತಿತ್ತು. ಕೈಯಲ್ಲಿ ಸಾಮಾನು ಗಳನ್ನು ಹಿಡಿದುಕೊಂಡು ಎದ್ದೆ. ಕಣ್ಣು ಒರಸಿಕೊಂಡೆ. ಬೇವಿನ ಮರವನ್ನು ದಿಟ್ಟಿಸಿದೆ. ಸಂತೆ ಮರವನ್ನು ನೋಡಿದೆ. ಮೇಲಿನ ಟೊಂಗೆಯಲ್ಲಿ ಹಕ್ಕಿ ಯೊಂದು ಕುಳಿತಿತ್ತು. ಹಾಡಿತು. ಮರೆವೆಯ ಹಾಡು ಹಾಡಿತು. ತಿಳಿವಿನ ತತ್ವ ಕೂಗಿತು. ಕೂಗುತ್ತ ಹಾರಿ ಹೋಯಿತು. ಕಣ್ಣು ತೀಡಿಕೊಳ್ಳುತ್ತ ಸ್ವಲ್ಪ ಮುಂದಕ್ಕೆ ಹೋಗಿ ಹಿಂದೆ ಹೊರಳಿ ನೋಡಿದೆ. ಬೇವಿನ ಮರ ಕಾಣಲಿಲ್ಲ. ಸಂತೆ ಮರ ಕಾಣಲಿಲ್ಲ. ಮರೆವೆಯ ಮರ ಕಂಡಿತು.

ಮರ ಕೂಗಿತು. ನಿಲ್ಲು ಎಂದು ಎಲೆ ಬೀಸಿ ಕೂಗಿ ಹೇಳಿತು.

' ಜೀವನವೊಂದು ಸಂತೆ. ನಾನು ಸಂತೆಯ ಮರ. ಜೀವನದ ಆಗು ಹೋಗುಗಳನ್ನು ನಾನು ಬಲ್ಲೆ. ನನ್ನನ್ನು ಮಾತ್ರ ಜನ ಅರಿತು ಕೊಳ್ಳರು. ನಿರ್ಜೀವಿ ಎನ್ನುತ್ತಾರೆ. ನನಗೆ ಅದರಿಂದ ದುಃಖವಿಲ್ಲ. ಆದರೆ ಜನತೆಯ ಕಷ್ಟ ನೋಡಿ ನನಗೆ ಮರುಕ ಹುಟ್ಟುತ್ತದೆ. ನಿನ್ನ ತಮ್ಮ ಸುಖವಾಗಿ ದ್ದಾನೆ. ನೀನು ನೊಂದುಕೊಳ್ಳಬೇಡ. ಅವನ ಕ್ಷೇಮ ನಾನು ನೋಡಿಕೊಳ್ಳು ತ್ತೇನೆ. ನನ್ನ ಪಕ್ಷದವರು ನೋಡಿಕೊಳ್ಳುತ್ತಾರೆ. ಆತ ಸಂತೆ ಮುಗಿಸಿ ಹೋಗಿದ್ದಾನೆ. ಅವನಿಗೆ ಯಾರ ಚಿಂತೆಯೂ ಇಲ್ಲ. ಹೋಗು ' ಎಂದಿತು.

ಮರದ ಮಂತ್ರ ಕಿವಿಗೊಟ್ಟು ಕೇಳಿದೆ. ಮನ ತೆತ್ತು ಕೇಳಿದೆ. ಹೇಳುವ ದಾದ ಮೇಲೆ ವಂದನೆ ಅರ್ಪಿಸಿದೆ ಮರಕ್ಕೆ. ಇನ್ನೂ ಮರವೇ ? ಅಲ್ಲ' ಜೀವನ ದ್ರಷ್ಟಾರ.

---

# ತಿರುಗದ ದಾರಿ

‘ ನಮ್ಮ ಶಿವನ ನೋಡಿದಿರೇನು ? ’

‘ ಈಗ ಇಲ್ಲಿಯೇ ಇದ್ದ. ಈ ಕಡೆ ಒಬ್ಬನೇ ಹೋದ. ’

‘ ಯಾವ ಕಡೆ ? ’

‘ ಅಗೋ, ಆ ದಿನ್ನೆಯ ಮೇಲೆ ಒಂದಿಷ್ಟು ನಿಂತು ಊರ ಕಡೆ ಹೊರಳಿ ನೋಡಿ ಹಾಗೆಯೇ ಮುಂದಕ್ಕೆ ಹೋದ. ’

‘ ಒಬ್ಬನೇ ಇದ್ದನೇನು ? ’

‘ ಹೌದು. ಮತ್ತಾರೂ ಇರಲಿಲ್ಲ. ’

‘ ಏನಾದರೂ ಹತ್ತಿರ ಸಾಮಾನನ್ನು ಇಟ್ಟುಕೊಂಡಿದ್ದನೇ ? ’

‘ ಏನೂ ಇಲ್ಲ. ತಲೆಯ ಮೇಲೆ ಮುದುಡಿದ ಗಾಂಧೀ ಟೋಪಿ. ಮೈಮೇಲೆ ಅಂಗಿ, ಕೋಟು, ಒಂದು ಗಿಡ್ಡ ಚಣ್ಣ. ಮತ್ತೇನೂ ಇಲ್ಲ. ಬರಿ ಗಾಲಿನಿಂದ ನಡೆದು ಹೋದ. ’

‘ ನಿಮ್ಮೊಡನೆ ಏನಾದರೂ ಕೇಳಿದನೇನು ? ’

‘ ಏನೂ ಇಲ್ಲ. ನಾವು ಮಾತನಾಡಿಸಿದರೂ ಚೆನ್ನಾಗಿ ಮಾತಾಡಲಿಲ್ಲ. ಏಕೋ ಮುಖ ಉರಿಯುತ್ತಿತ್ತು. ಮನೆಯಲ್ಲಿ ಜಗಳ ಬಂದಿತ್ತೇನು ? ’

‘ ಹೌದು. ಮುಂಜಾನೆ ಸಾಲೆಗೆ ಹೋಗುವಾಗ ಹಟ ಹಿಡಿದು ಪಾರ್ವತಿಯ ಕಾಲ ಮೇಲೆ ಪಾಟಿ ಒಗೆದು ಒಡೆದುದರಿಂದ ಅಪ್ಪನಿಂದ ಏಟು ತಿಂದ. ಹಟ ಮಾಡಿ ಮನೆ ಬಿಟ್ಟು ಬಂದಿದ್ದಾನೆ. ತಾಯಿ ಊರಿಗೆ ಹೋಗುವಂತೆ ಕಾಣುತ್ತದೆ. ’

‘ ಇರಬೇಕು. ಆ ಕಡೆಗೇ ಹೋಗುವಂತೆ ಕಾಣಿಸಿಕೊಂಡ.

‘ ಹಾಗಾದರೆ ನಾನು ಬೇಗ ಹೋಗಿ ನೋಡಿ ಬರುತ್ತೇನೆ. ’ ಎಂದು ನಮ್ಮೂರಿನ ಆ ರೈತರಿಗೆ ಹೇಳಿ ಹೊರಟು ಹೋದೆ. ಹಾದಿಯಲ್ಲಿ ಕಂಡ ಕಂಡವರನ್ನು ಕೇಳುತ್ತ ನಡೆದೆ.

‘ ನನ್ನ ಶಿವನ ನೋಡಿದಿರೇನು ? ’

‘ ಯಾರು ? ’

‘ ನನ್ನಷ್ಟು ಸಣ್ಣ ಹುಡುಗ. ’

‘ ತಲೆಯ ಮೇಲೆ ಗಾಂಧಿ ಟೋಪಿ ಇತ್ತೇನು ? ’

‘ ಹೌದು, ಅವನೆ ’

‘ ಚಣ್ಣ ಹಾಕಿದ್ದನೇನು ? ’

‘ ನಿಜ. ಅವನೇ. ’

‘ ಮೈಮೇಲೆ ಕೋಟು ಇತ್ತೇನು ? ’

‘ ಹೌದಪ್ಪ, ಅವನೇ. ಎಲ್ಲಿ ಹೋದ ? ’

‘ ಈ ದಾರಿ ಎಲ್ಲಿಗೆ ಹೋಗುತ್ತದೆ ? ’ ಎಂದು ನಮಗೆ ಕೇಳಿದ.

‘ ಅದಕ್ಕೆ ನೀವೇನು ಹೇಳಿದಿರಿ ? ’

‘ ಆತ ಕೇಳಿದ ದಾರಿ ತೋರಿದೆವು. ’

‘ ಮತ್ತೇನು ಕೇಳಿದ ? ’

‘ ಮುಂದೆ ಕೆರೆ ಇದೆಯೆ ? ಎಂದು ಕೇಳಿದ. ಇದೆ ಎಂದು ಹೇಳಿದೆವು. ’

ಕಂಡವರನ್ನು ಕೇಳುತ್ತ ಮತ್ತೆ ಮುಂದುವರಿದೆ. ಕೆರೆಯೊಂದು ದೂರದಲ್ಲಿ ಕಂಡಿತು. ಅಲ್ಲಿ ಯಾರೋ ಕುಳಿತಂತೆ ಕಂಡಿತು. ಓಡಿ ಹೋಗಿ ಅಲ್ಲಿಗೆ ಬಂದೆ. ಶಿವನಿರಲಿಲ್ಲ. ಪಥಿಕರಿದ್ದರು.

‘ ಬಣ್ಣ ನಾದಗಪ್ಪು. ಮುಖ ದುಂಡಗೆ. ಮುಖಕ್ಕೆ ಮುದ್ದಾದ ಮೂಗು. ಹಲ್ಲು ಸರಿಯಾಗಿವೆ. ಕೈಬೆರಳು ಒಂದಿಷ್ಟು ಕಪ್ಪು. ಆತ ನನ್ನ ತಮ್ಮ. ಮನೆಯಲ್ಲಿ ಜಗಳಾಡಿ ಬಂದಿದ್ದಾನೆ. ನೀವು ನೋಡಿದಿರೇನು ? ’

‘ ಚಣ್ಣ ಟೊಪ್ಪಿಗೆ ಹಾಕಿದ್ದನೇನು ? ’

‘ ಹೌದು, ಅವನೇ ! ’

‘ ಇಲ್ಲಿ ಕುಳಿತಿದ್ದ. ನೀರು ಕುಡಿದು ದಣಿವಾರಿಸಿಕೊಂಡು ಇಲ್ಲಿಂದ ಹೋಗಿ ತಾಸಾಯಿತು. ’

‘ ನಿಮ್ಮೊಡನೆ ಏನಾದರೂ ಮಾತನಾಡಿದನೇನು ? ’

‘ ಮಾತಾಡಲಿಲ್ಲ. ಆತನ ಮುಖ ಬಳಲಿದಂತೆ ತೋರಿತು. ನೊಂದು ಕೊಂಡಂತೆ ಕಂಡ. ’

‘ ಓಡಿ ಹೋದರೆ ಕೈಗೆ ಸಿಕ್ಕಾನೇನು ? ’

‘ ಬೇಗ ಹೋಗಿರಿ. ಸಿಗಬಹುದು. ’

ಅವರನ್ನು ಬಿಟ್ಟು ಧಾವಿಸಿ ನಡೆದೆ. ಹಾದಿಯಲ್ಲಿ ಎಮ್ಮೆಯನ್ನು ಮೇಯಿಸುತ್ತ ಮುದುಕಿಯೊಬ್ಬಳು ಕೋಲನೂರಿ ನಿಂತಿದ್ದಳು.

‘ ಒಬ್ಬ ಸಣ್ಣ ಹುಡುಗ ಇಲ್ಲಿಂದ ಹಾದು ಹೋದನೇ, ಅಮ್ಮ ? ’

‘ ಆ್ಹಂ. ’

‘ ಒಬ್ಬ ಹುಡುಗ ಹೋದನೇ ಅಮ್ಮ ? ’

‘ ಯಾರು ? ಹುಡುಗನೇ ? ’

‘ ಹೌದಮ್ಮ. ’

‘ ಏಕೆ ? ಅಷ್ಟೇಕೆ ಬಳಲಿದ್ದೀ, ಅಪ್ಪ ! ’

‘ ನನ್ನ ತಮ್ಮ ಅವನು. ಮನೆಯಲ್ಲಿ ಕಾದಾಡಿ ಬಂದಿದ್ದಾನೆ. ಎಲ್ಲಿ ಯಾದರೂ ಹೋಗಿ ಏನಾದರೂ ಮಾಡಿಕೊಂಡಾನೆಂಬ ಅಂಜಿಕೆ. ಆತನನ್ನು ಹುಡುಕ ಬಂದಿದೇನೆ, ಅಮ್ಮ. ’

‘ ಛೀ, ಹುಚ್ಚ ನೀನು. ಬಳಲ ಬೇಡ. ಇಲ್ಲಿಯೇ ಕೂಗಳತೆಯಲ್ಲಿ ಇರಬಹುದು. ’

ಆ ಮುದುಕಿಯನ್ನು ಬಿಟ್ಟು ಓಡಿ ಓಡಿ ಹೋದೆ. ನೇಸರು ನೆತ್ತಿಯ ಮೇಲೆ ಬಂದಿದ್ದ. ಕಾಲು ಸುಡುತ್ತಿದ್ದವು. ನೆಲದ ಮೇಲೆ ಒಂದು ನಿಮಿಷ ಹೆಚ್ಚು ನಿಂತರೆ ನೆತ್ತರ ‘ ಚುರ್ರ್ ’ ಎನ್ನುತ್ತಿತ್ತು. ಬಾಯಿ ಆರಿತ್ತು.

ಅದಕ್ಕಿಂತಲೂ ಮನವು ಹೆಚ್ಚಿಗೆ ಆರಿತ್ತು. ತಮ್ಮ ಸಿಕ್ಕರೆ ಸಾಕು. ಎಲ್ಲ ನೋವು ಇಂಗಿ ಹೋಗುತ್ತಿತ್ತು. ಇದನ್ನೆಲ್ಲ ಮರೆತು ಓಡಿ ಓಡಿ ಹೋದೆ. ದೂರದಲ್ಲಿ ಒಂದು ಗಿಡದ ಅಡಿಯಲ್ಲಿ ಯಾರೋ ಕುಳಿತಂತೆ ಕಂಡಿತು. ತಮ್ಮನೇನೋ ಎಂದುಕೊಂಡೆ. ರಕ್ತ ಚಿಮ್ಮುತ್ತಿತ್ತು. ಸಮೀಪಕ್ಕೆ ಬರುವಷ್ಟರಲ್ಲಿ ಆತ ಶಿವನೇ ಆಗಿದ್ದ. ಹುಡುಕವ ಬಳ್ಳಿ ಕಾಲಿಗೆ ತೊಡಕಿದಂತಾಯಿತು. ನಾನು ಬರುವುದನ್ನು ಕಂಡು ಶಿವನು ಏಳತೊಡಗಿದ. ಅಲ್ಲಿಂದಲೇ ಕೂಗಿದೆ. ಹತ್ತಿರ ಹೋಗಿ ರಮಿಸಿದೆ. ಸಂತಯಿಸಿದೆ. ' ಅಪ್ಪ ' ' ಅಣ್ಣ ' ಎಂದು ನ್ಯೈದಡವಿ ಮನೆಗೆ ಕರೆದುಕೊಂಡು ಬಂದೆ.

ತಮ್ಮನನ್ನು ಕರೆದುಕೊಂಡು ಬರುವಾಗ ದಾರಿಯಲ್ಲಿ ಕಂಡ ಜನ ನಮ್ಮನ್ನೇ ನೋಡುತ್ತಿದ್ದರು. ' ತಿರುಗಿ ಬಂದನೇ ' ಎಂದು ಕೇಳುತ್ತಿದ್ದರು. ಅವರಿಗೆ ಮೌನವಾಗಿ ಉತ್ತರ ಕೊಡುತ್ತ ಮನೆಗೆ ಬಂದೆ.

ಆ ನೆನಪು ಇಂದು ಹೃದಯವನ್ನು ಕೊರೆಯುತ್ತಿದೆ. ಅಂದು ಕರೆದು ಕೊಂಡು ಬಂದ ತಮ್ಮ ಇಂದು ತಿರುಗದ ದಾರಿಯನ್ನು ಹಿಡಿದು ಹೋಗಿದಾನೆ. ಎಲ್ಲಿಂದ ತರಲಿ ? ಶಿವನೇ, ಎಲ್ಲಿ ಹೋದೆ ?

---

# ಪತಿತೆ - ಪಾವನೆ

ನಮ್ಮ ಮನೆಯ ಹಿತ್ತಿಲಲ್ಲಿರುವ ಹೂ ಬಳ್ಳಿಗಳಿಗೆ ನೀರೆರೆಯುತ್ತಿದ್ದೆ. ಬಹಳ ದಿನಗಳಿಂದ ಬೆಳೆದು ಬಂದ ಬಂಧುತ್ವ ಅದು. ಅವುಗಳ ಮೇಲಿನ ಪ್ರೇಮ ಭಾರತ ಹುಣ್ಣಿಮೆಯ ಚಂದಿರನಂತೆ ನಿರ್ಮಲವಾದುದು. ಆ ದಿನ ಸಂಜೆ ಹೂ ಬಳ್ಳಿಗಳಿಗೆ ನೀರುಣ್ಣಿಸುತ್ತಿದ್ದೆ. ನನ್ನ ಸುತ್ತಲು ಯಾರೂ ಇರಲಿಲ್ಲ. ಇನ್ನೇನು ? ನಾನೊಬ್ಬನೇ ಅರಳಿದ ಹೂಗಳ ಜತೆಗೆ ಮಾತನಾಡು ವುದು; ಅತ್ತಿತ್ತ ಗೋಣೆತ್ತಿನೋಡಿ ಹಾಯಾಗಿ ಹೂಗಳನ್ನು ಮುದ್ದಿಟ್ಟು ಬಿಡುವುದು – ಹೀಗೆಯೆ ಕಾರ್ಯ ತತ್ಪರನಾಗಿ ಸಾಗಿದ್ದಾಗ ಕಪ್ಪು ಕವಿದುದೂ ನನಗೆ ಗೊತ್ತಾಗಲಿಲ್ಲ. ಕೆಲ ಹೊತ್ತಿನ ಮೇಲೆ ತೋಳುಗಳು ಎಚ್ಚರ ಕೊಟ್ಟಾಗ ಕಾರ್ಯ ನಿಲ್ಲಿಸಿ ಬಾಳೆಯ ಗುಂಪಿನ ಕಡೆಗೆ ನೋಡಿದೆ. ' ಹೋ ! ಮರಿ ಬಿಟ್ಟದೆಯಲ್ಲ ಹುಚ್ಚಿ ! 'ಅಂತೂ ಫಲ ಕೊಟ್ಟಿತು ' ಎಂದೆನ್ನುತ್ತಿರು ವಾಗಲೆ ಹೊರಗಿನ ಕತ್ತಲು ಮನವನ್ನು ಆವರಿಸಿತು. ಕೈಯೊಳಗಿದ್ದ ನೀರಿನ ಪಾತ್ರೆಯನ್ನು ಅಲ್ಲಿಯೇ ಇಟ್ಟು ಉಸ್ಸೆಂದು ಹೊರಬೀಳುವಷ್ಟರಲ್ಲಿ ಯಾರೊ ಕರೆದರು.

' ಒಂದಿಷ್ಟು ಬರುತ್ತೀರಾ ? '

' ಯಾರವರು ? '

' ನಾನೇ ಒಡೆಯ ! '

' ನಾನು ಎಂದರೆ........ ? ಯಾರು ? ಹೆಸರೇನು ? '

' ಇಲ್ಲಿ ನಿಂತಿದ್ದೇನೆ. ನಾನೇ, ಒಡೆಯ ! '

'ಎಲ್ಲಿ ? ಯಾರವರು ? ' ಎಂದು ಅತ್ತಿತ್ತ ನೋಡಿದೆ. ಬಾಳೆಯ ಗಿಡದ ಮರೆಯಿಂದ ಕೂಗು ಬಂದಂತಾಯಿತು. ಸಮೀಪದಲ್ಲಿ ಹೋಗಿ ನಿಂತೆ. ಒಮ್ಮಿಂದೊಮ್ಮೆಲೆ ' ಧಡಂ ' ' ಧಡಂ ' ಎಂದು ಸಪ್ಪಳಾಯಿತು. ಬೆದರಿದೆ. ' ಅಂಜ ಬೇಡಿರಿ ' ಎಂಬ ದನಿಯೊಂದಿಗೆ ಬಾಳೆಯ ದಡದಿಂದ ಹೆಂಗಸೊ ಬ್ಬಳು ಮೂಡಿ ಬಂದಳು. ಅವಳನ್ನು ನೋಡಿ ಕಾಲು ತರತರ ನಡುಗ ತೊಡಗಿದುವು. ತುಟಿ ಆರಿತು. ಎದೆ ಹಾರ ತೊಡಗಿತು. ಅವಳು ಮಾತ ನಾಡತೊಡಗಿದಳು.

" ಅಂಜ ಬೇಡಿರಿ, ಒಡೆಯ. ದೀನೆ ನಾನು. ಪಾಪಿ ನಾನು. ನನ್ನ ಜೀವನದ ಕೊನೆಯ ಕತೆ ಹೇಳಿ ಹೋಗಲು ಬಂದಿದ್ದೇನೆ. ನೀವು ಕೇಳದೆ ಇದ್ದರೆ ಇನ್ನಾರು ಗತಿ ? ಕಷ್ಟವನ್ನು ಅರಿತವರೇ ಅರಿಯಬಲ್ಲರು. ಹೊಟ್ಟೆ ತುಂಬುವಂತೆ ತಿಂದು ತಿಂದು ದಣಿದವರಿಗೆ ಹಸಿವೆಯ ನೋವಿನಿಂದ ಹಂಬಲಿಸುವ ದೀನರ ಸೊಲ್ಲು ಗೊತ್ತಾದೀತೆ ? ಸಿಮ್ಮ ನೆರವಿನಿಂದ ಬೆಳೆದು ಬಂದಿದ್ದೇನೆ. ಕಾಲ ಕಾಲಕ್ಕೆ ಸರಿಯಾಗಿ ನನ್ನನ್ನು ರಮಿಸಿ ನೀವು ಹಾಲೆರೆ ಯದಿದ್ದರೆ ನಾನು ಬಂಜೆಯಾಗುತ್ತಿದ್ದೆ. ಹಾ, ಬಂಜೆತನವೇ ! ಬಂಜೆಯಾಗಿ ಬದುಕಿದವಳ ಮುಖ ಲೋಕದಲ್ಲಿ ಎಷ್ಟೊಂದು ನೋವು ಇರಿತವನ್ನು ನುಂಗಬೇಕು ! ಅಂತಹ ಬಂಜೆತನವನ್ನು ನಾನು ಆದರದಿಂದ ಎತ್ತಿಕೊಳ್ಳ ಬಲ್ಲೆ. ಆದರೆ ಒಡೆಯಾ, ತಾರುಣ್ಯದಲ್ಲಿ ವಿಧವೆಯಾದವಳ ಗೋಳು ಏತಕ್ಕೂ ಬೇಡ. ಇದಿರಿಗಿದ್ದ ಬೆಂಕಿಯ ಮೊತ್ತವನ್ನು ಅಪ್ಪಿಕೊಂಡು ಬೆಂದು ಹೋಗುವುದು ಹಿತ. ಬಾಲ ವಿಧವೆಯಾಗಿ ಬದುಕುವುದೆಂದರೆ ವಿಷದ ಸಂಚಯವನ್ನು ನಿಮಿಷಕ್ಕೊಂದು ಬಾರಿ ತಿಂದಂತೆಯೆ ಸರಿ. ನಾನೊಮ್ಮೆ ಹಿಂದಿನ ಜನುಮದಲ್ಲಿ ಬಾಲ ವಿಧವೆಯಾಗಿದ್ದೆ. ಬಡತನದಲ್ಲಿ ಹುಟ್ಟಿದೆ. ಹೆತ್ತವರು ತೊಟ್ಟಿಲಕ್ಕೆ ಬಾಸಿಂಗ ಕಟ್ಟುತ್ತಲೆ ಕೈ ಬಿಟ್ಟು ಹೋದರು. ಕಂಡವರ ಮನೆಯ ಬಾಗಿಲ ಕಾಯ್ದು ತಾರುಣ್ಯದ ಹೊಸ್ತಿಲಲ್ಲಿ ಕಾಲಿಟ್ಟೆ. ಉಟ್ಟ ಹರಕು ಸೀರೆಯೊಂದಿಗೆ ಗಂಡನ ಮನೆಯ ಅಂಗಳದಲ್ಲಿ ಕಾಲಿಡು ವಾಗಲೆ ಬಳೆ ಮುಕ್ಕಾದವು. ಕುಂಕುಮ ಅಳುಕಿತು. ಹೊಟ್ಟೆ-ಬಟ್ಟೆಯ ಚಿಂತೆ ಬೆನ್ನು ಹತ್ತಿತು. ಹಸಿವೆಯ ದಾಹವನ್ನು ಕೆಲಕಾಲ ತಡೆಯಬಹುದೆಂದೆನ್ನಿ ಸಿತು ನನಗೆ. ಆದರೆ ಕಾಮದ ದಾಹವನ್ನು ತಡೆಯುವ ಸಾಮರ್ಥ್ಯ ನನಗೆ ದೊರಕಲಿಲ್ಲ. ಬಡತನದಲ್ಲಿ ಬೆಳೆದು ಬಂದ ಯುವತಿಯ ಕಡೆಗೆ ಕಂಡವರೆಲ್ಲ ನೋಟ ಹೊರಳಿಸತೊಡಗಿದರು. ಮರದ ಆಶ್ರಯವನ್ನು ತಪ್ಪಿಸಿಕೊಂಡು ನೆಲದ ಮೇಲೆ ಬಿದ್ದ ಎಲೆಗಳನ್ನು ತುಳಿಯುವುದು ಲೋಕದ ರೂಢಿ. ಇಂತು ಪರಿಸ್ಥಿತಿ ಒದಗಿದಾಗ ಒಮ್ಮೊಮ್ಮೆ ಬೀಸಿದ ಗಾಳಿಯ ಕಡೆಗೆ ಕತ್ತೆತ್ತಿ ನೋಡಿದೆ.

" ಅಷ್ಟರಲ್ಲಿ ಊರಿನ ಪುಣ್ಯವೊಂತರೊಬ್ಬರು ನನ್ನ ಹೇಸಿ ಬಾಳನ್ನು ಕಂಡು ಮರುಗಿದರು. ಒಂದು ದಿನ ನನ್ನ ಗುಡಿಸಲಿಗೆ ಬಂದು ಮಗಳೇ

ಎಂದು ಕರೆದರು. ಹಳ್ಳವಲ್ಲಿ ತೇಲುವ ಬಳ್ಳಿಯನ್ನು ಹಿಡಿದು ದಂಡೆಗೆ ತರ ಬೇಕೆಂದು ಬಯಸಿದರು ಅವರು. ಎಳೆತನದಲ್ಲಿದ್ದ ನನ್ನ ಮುಗುದ ಸ್ವಭಾವಕ್ಕೆ ಅವರು ತುಂಬ ಮೆಚ್ಚಿದ್ದರು. ಗಂಡ ತೀರಿ ಹೋದ ನಾಲ್ಕೆಂಟು ದಿನಗಳಲ್ಲಿ ಊರಿನವರೆಲ್ಲರ ಕರುಣದ ಕಂದನಾದೆ. ಸಾಧ್ವಿ ಎಂದು ಎಲ್ಲರೂ ಕೊರಲೆತ್ತಿ ಕೂಗಿದರು. ಆ ಗುಣವನ್ನೇ ಮೆಚ್ಚಿ ಅವರು ನನ್ನನ್ನು ಪೊರೆಯುವ ಹಿರಿತನವನ್ನು ತೋರಿದರು. ಅಂದಿನಿಂದ ಅವರ ಮನೆಯ ಮಗ್ಗುಲಲ್ಲಿಯೇ ಗುಡಿಸಲೊಂದನ್ನು ಕಟ್ಟಿಕೊಂಡು ಹರಿದ ಬಾಳ ಬಳ್ಳಿಯನ್ನು ಬೆಳೆಯಿಸ ತೊಡಗಿದೆ. ಮುಂಜಾವಿನಿಂದ ಸಂಜೆಯವರೆಗೆ ಅವರ ಮನೆಯಲ್ಲಿ ದುಡಿದು ಅವರಿತ್ತುದನ್ನು ಊಟ ಮಾಡಿ ಗುಡಿಸಲಿಗೆ ಮಲಗಲು ಬರುತ್ತಿದ್ದೆ. ಊಟ, ಅರಿವೆ, ನನ್ನ ಜೀವನದ ಎಲ್ಲ ವೆಚ್ಚವೂ ಅವರದೇ. ಒಂದು ದೃಷ್ಟಿಯಿಂದ ನನ್ನ ಜೀವನದ ಹೊಣೆ ತುಂಬಾ ಅವರ ಮೇಲೆ ಬಿದ್ದಿತು. ಹೀಗಾಗಿ ನನ್ನ ಹೊಣೆ ನನಗೆ ಅರಿಯದಂತಾಯಿತು. ಮನದಲ್ಲಿ ಏನೋ ಹೊಂಚು ಹಾಕಿದೆ. ಅಷ್ಟರಲ್ಲಿ ಬೇಟೆಗಾರರ ತೋಳ ತೆಕ್ಕೆಯಲ್ಲಿ ಸೆರೆ ಬಿದ್ದೆ.

" ನನ್ನನ್ನು ಕಾಪಾಡುವ ಆ ಪುಣ್ಯವಂತರ ಕಣ್ಣಿನಲ್ಲಿ ಮೊದಲಿ ಗಿಂತಲೂ ಹೆಚ್ಚು ಸಂಯಮಿಯಾಗಿ ತೋರುವಂತೆ ನಟಿಸಿದೆ. ಅದು ಬರೀ ನಟನೆ. ಜಾರತನ, ವಂಚನೆ ಬಯಲಿಗೆ ಬೀಳದ ದಿನವುಂಟೆ ? ಕಾಲ ನನ್ನ ಕಳ್ಳತನವನ್ನು ಬೀದಿಗೆಳೆಯಲು ಕದ್ದು ಕುಳಿತಿದ್ದ. ಜನರಲ್ಲಿ ದಿನದಿನಕ್ಕೂ ನನ್ನಲ್ಲಿ ಸಂಶಯ ವೃತ್ತಿ ಮೊಳದೋರತೊಡಗಿತು. ಒಂದು ದಿನ ಎಲ್ಲರ ಚಿತ್ತ ಕೆರಳಿಸುವ ಸುದ್ದಿಯಾದೆ. ಹೊಟ್ಟೆ ಏರತೊಡಗಿತು. ನನ್ನ ಭಾರ ಹೊತ್ತ ಒಡೆಯರಿಗೂ ಈ ಸಂಗತಿ ಗೊತ್ತಾಯಿತು. ನನಗಿಂತಲೂ ಹೆಚ್ಚಾಗಿ ಅವರು ಗೊಳೋ ಎಂದು ಅತ್ತರು. ಎಲ್ಲರ ಪಾಲಿನ ಸುಧೆಯಂತೆ ಇದ್ದರವರು. ಲೋಕಾಪವಾದ ಅವರಿಗಾಗಿ ಕಾಯ್ದು ನಿಂತಿತ್ತು. ಅಮೃತ ವಿಷವಾದರೆ, ತಾಯ ಹಾಲು ನಂಜಾದರೆ ಲೋಕದಲ್ಲಿ ಬದುಕುವ ಆಸೆ ಉಂಟೇ ? ನಾನು ಆತ್ಮಹತ್ಯ ಮಾಡಿಕೊಳ್ಳುವ ಸಂಜೆಗೇ ಅವರು ಎದೆ ಯೊಡೆದುಕೊಂಡು ಸತ್ತು ಹೋದರು.

" ದೇವರ ಇದಿರಿನಲ್ಲಿ ತೀರ್ಮಾನು ನಡೆಯಿತು. ನನ್ನ ಜೀವಿತದ ರಕ್ಷಣೆ ಹೊತ್ತಿದ್ದ ಆ ಪುಣ್ಯವಂತರ ಬದಿಯಲ್ಲಿ ಕೆಳಗೆ ಮೊಗವಿಟ್ಟು ನಿಂತಿದ್ದೆ.

ಯಾರ ಪಾದಕ್ಕೆ ಬೀಳಲಿ? ದೇವನ ಪಾದಕ್ಕೇ? ಆ ಪುಣ್ಯವಂತರ ಪಾದಕ್ಕೇ? ಅಷ್ಟರಲ್ಲಿ ಭಗವಂತ ನನ್ನ ಮೇಲೆ ದಯೆ ತೋರಿದರು. ಬಾಲ ವಿಧವೆಯಾಗಿದ್ದಕ್ಕೆ ದೇವರು ನಾನು ಮಾಡಿದ ಅಪರಾಧವನ್ನು ಕ್ಷಮಿಸಿದ. ಶಿಶು ಹತ್ಯ ಮಾಡಿದ ದೋಷಕ್ಕೆ ಗುರಿಯಾದೆ. 'ಬಾಳೆಯಾಗಿ ಹುಟ್ಟಿ ಹೆರಿಗೆಯ ಕೆಲಸ ಮುಗಿಸಿ ಬೇಗ ಬಾ' ಎಂಬ ಆಜ್ಞೆಯನ್ನು ನಾನು ಪಾಲಿಸ ಬೇಕಾಯಿತು. ಬಾಲ ವಿಧವೆಯಾಗಿ ಬಾಳಿದ ಹುಡುಗೆಯ ಕೊರಲಿಗೆ ಇನ್ನೊಂದು ಮಂಗಲ ಸೂತ್ರ ಕಟ್ಟದೆ ಕೇವಲ ಬಾಳು ಸಾಗಿಸುವ ಕೈಗಂಬ ವಾದುದಕ್ಕೆ ಆ ಪುಣ್ಯವಂತರಿಗೆ ನನಗಿಂತಲೂ ಕಠಿಣವಾದ ಶಿಕ್ಷೆಯಾಯಿತು. 'ಬಾಳೆಯಾಗಿ ಭೂಮಿಗೆ ಬಂದ ಬಾಲ ವಿಧವೆಯ ಆದೊಂದು ರೂಪಕ್ಕೆ ನೀರೆರೆದು ಹಣ್ಣು ಬಿಡುವ ಮುನ್ನವೆ ಹೊರಟು ಬಾ' ಎಂಬ ಆಜ್ಞೆಯನ್ನು ಅವರು ಪಾಲಿಸಬೇಕಾಯಿತು.

"ಆ ಪುಣ್ಯವಂತರೇ ನಿಮ್ಮ ಬೆನ್ನ ಬಳಿಯಲ್ಲಿ ಹುಟ್ಟಿ ಬಂದರು. ಶಿವನೆಂದು ಹೆಸರೆತ್ತಿ ಕರೆದಿರಿ ನೀವು. ಜಗದ ಮರ್ಮ ಅವರಿಗೆ ತಿಳಿದಿತ್ತು. ನೀವಿಬ್ಬರೂ ಅಂದು ಬಂದು ಇಲ್ಲಿ ತಗ್ಗು ಹೊಳಿದಿರಿ. ನಿಮ್ಮ ತಮ್ಮ ನನ್ನನ್ನು ಊರಿದರು. ಜೀವಿಸಿರುವತನಕೂ ಅವರೇ ನೀರೆರೆದರು ನನಗೆ. ನಾನು ನೀರು ಹಣಿಸಿಕೊಳ್ಳುವ ಸಂಜೆಗೇ ಅವರು ಹೊರಟು ಹೋದರು. ಇಂದು ನಾನು ಹೆರಿಗೆಯ ಕೆಲಸ ಮುಗಿಸಿದ್ದೇನೆ. ಪತಿತೆಯಾದವಳು ಪಾವನೆಯಾದೆ. ಜೀವನವೂ ಹಾಗೆಯೆ. ಧರ್ಮ ಕಾರ್ಯಕ್ಕಾಗಿ ಹೋರಾಡಬೇಕು. ಹೋರಾಡು ವಂದು ನಂಜೇ ಎದ್ದು ತೋರುತ್ತದೆ. ಸ್ತುತಿ ಬರಲಿ. ನಿಂದೆ ಬರಲಿ. ಅಂಜದೆ ಅಳುಕದೆ ಕೈಕೊಂಡ ಕಾರ್ಯ ಸಾಗಿಸಬೇಕು. ಇಲ್ಲಿ ಫಲ ಸಿಗದಿದ್ದರೆ ಅಲ್ಲಿ ಅದು ಸಲ್ಲುತ್ತದೆ; ಸಂಶಯವಿಲ್ಲ. ಹೊರಟು ಹೋಗುತ್ತೇನೆ. ಬೀಳ್ಕೊಡಿ."

ನೋಡು ನೋಡುವಷ್ಟರಲ್ಲಿಯೇ ಆ ಹೆಂಗಸು ಬಾಳೆಯ ದಡದಲ್ಲಿ ಮರೆಯಾಗಿ ಬಿಟ್ಟಳು. ಚಿತ್ರದಲ್ಲಿ ಬರೆದ ಗೊಂಬೆಯಂತೆ, ಕಲ್ಲಲ್ಲಿ ಕಂಡರಿಸಿದ ಚಿತ್ತಾರದಂತೆ ಎಲ್ಲವನ್ನು ನೋಡಿದೆ. ಭಾವಾವೇಶದ ಒತ್ತಡದಿಂದ ತಲೆ ಬಿರಿಯುವಂತೆ ತೋರಿತು ನನಗೆ. ಅಲ್ಲಿ ನಿಲ್ಲದೆ ಪಾವನೆಗೆ ಕೈ ಮುಗಿದು ಹೊರಬಿದ್ದೆ. ತಿರುಗಿ ಅವಳನ್ನು ನೋಡಲಿಲ್ಲ.

---

# ಮೋಟು ಮರದೊಡನೆ!

ನಮ್ಮ ಊರ ಮುಂದೆ ನೀಳವಾಗಿ ಬೆಳೆದ ಮರವೊಂದನ್ನು ನಿರೀಕ್ಷಿಸುತ್ತ ನಿಂತಿದ್ದೆ. ಹಿಂದೊಮ್ಮೆ ಎಂದೊ ಅದೇ ಗಿಡದ ಬದಿಯಲ್ಲಿ ನಾನು, ನನ್ನ ತಮ್ಮ ಶಿವ, ದುರಗ ಮೂವರೂ ಕುಳಿತುಕೊಂಡು ಮಾತನಾಡಿದ ಪ್ರಸಂಗ ನೆನಪಿಗೆ ಬಂದು ಮನವನ್ನು ಬೇಗುದಿಗೀಡು ಮಾಡಿತು. ಹೃದಯ ಮಂಥನ ನಡೆಯಿತು.

ಎದುರಿಗೆ ಯಾರೋ ಹಾಯ್ದು ಹೋದಂತಾಯಿತು. ಕನಸಿನ ಪರದೆ ಮೇಲಕ್ಕೇರಿಸಿ ಪ್ರಪಂಚದ ಕಡೆಗೆ ನೋಟ ಹರಡಿದೆ. ದುರಗನ ಹೆಂಡತಿ ಅದೇ ದಾರಿಯಲ್ಲಿ ಹೋಗುತ್ತಿದ್ದುದನ್ನು ಕಂಡು ಕೂಗಿದೆ.

'ಹನುಮವ್ವಾ........?'

'ಓ, ಎಪ್ಪಾ!'

'ಬಾವ್ವಾ. ಬಹಳ ತಪ್ಪು ಮಾಡಿದೆ. ಇನ್ನೇನು ಮಾಡೋದು. ಕೈ ಮೀರಿ ಹೋಗಿದೆ!'

'ಏನು ಮಾಡಲಿ ಹಡೆದಪ್ಪ, ನನಗೆ ಸಕ್ತಿ ಇದ್ದಷ್ಟು ಓಡಾಡಿ ಮಾಡಿದೆ. ದೇವ್ರು ಮೆಚ್ಚಲಿಲ್ಲ.'

'ಹುಚ್ಚಿ....! ದೇವ್ರು ಮೆಚ್ಚೋದು ಬಿಡೋದು ಏನು ಗೊತ್ತಾಗ್ತದೆ ನಿಮುಗ? ಕಾರ್ಯ ಮಿಕ್ಕಿ ನಿಂತಾಗ ದೇವರ ಕಡೆ ನೋಡೋದು. ಅದನ್ನು ಬಿಟ್ಟುಕೊಟ್ಟು ಬರೀ ದೇವ್ರು ದೇವ್ರು ಅಂದರೆ ಆತ ನಿಮ್ಮ ಮನೇ ಆಳಾಗಿ ಓಡಾಡಬೇಕೇ? ಹಾ! ಮತ್ತೇ? ನೀನನ್ನೋದೇನು.'

'ಎಪ್ಪಾ, ನೀವನ್ನೋದು ಬರಾಬರಿ. ಆತನ ಜಡ್ಡು ನಮುಗ ಒಂದೀಟು ಗೊತ್ತಾಗಲಿಲ್ಲ. ಮೊದಲ ದಿನ ತಲೆನೋಯ್ತೈತಿ ಅಂದ. ಬೇವಿನ ತಪ್ಪಲ ಅರೆದು ರಸ ಕುಡಿಸಿದೆ. ಆ ಮೇಲೆ ಅದು ನಿಂತಕೂಡ್ಲೆ ಮೈ ಚುಚ್ತೈತಿ ಅಂದ. ಹೊತಿಗಿ ಕೇಳಿ ಬಂದೆ. ಅರಳಿ ಮರದ ಮಾರೆವ್ವ ಕಾಡ್ತಾಳು ಅಂದ್ರು ಅಯ್ನೋರು. ಸಂತೆಗೆ ಅಂತ ತಗದಿಟ್ಟ ಮೂರಾಣೆ ತಕ್ಕೊಂಡು ಎಣ್ಣೆ ಕಾಯಿ ಕಪ್ಪರ ತಂದು ಮಾರೆವ್ವನ ಪೂಜೆ ಮಾಡಿದೆ. ಅದಕ ಒಂದೀಟ ಕಡಮೆ

ಆದೀತು ಅಂತು ಮಾಡಿದರ ಜರ ಸಂಜಿಕೆ ಕಳಕಳ ಕಾಳ ಕುದ್ದಂಗ ಬಂದುವು. ’

‘ ದುರಗವ್ವ, ಸಾಕು ನಿಲ್ಲಿಸು. ನೀ ಹೇಳೊ ಮಾರೆವ್ವ ಯಾರು ಆಕೆ ? ಆ ಅಯ್ಯಪ್ಪನಿಗೆ ಏನು ಗೊತ್ತದೆ. ಇದ್ದೊಬ್ಬ ಹೆಂಡ್ತಿ, ಎರಡು ಮಕ್ಕಳ ಹೊಟ್ಟೆಗೆ ಅನ್ನ ಹಾಕೊ ಶಕ್ತಿಯಿಲ್ಲ ಅವನಿಗೆ. ಊರಾಗ ಬಡವರ್ನ ಗೋಳಿಗೆ ಹೊಯ್ದು ಮಾರೆವ್ವ ಕಾಳವ್ವ ಅಂತ ಏನೋ ಹೇಳಿ ನಿಮ್ಮಿಂದ ರೊಕ್ಕ ಎಬ್ಬಿಸಿ ಹೊಟ್ಟೀ ತುಂಬಕೊತಾನೆ. ಈ ಅಯ್ನೋರ ಕುಲಾನ ಹೀಗೆ. ತಮ್ಮ ಹೊಟ್ಟಿ ತುಂಬಿದರ ತೀರಿತು. ಉಳಿದವರು ನಾಯ್ಲಿ ಬಿಡ್ಲಿ. ಹೂಂ. ಇರಲಿ. ಮುಂದೇನು ಮಾಡಿದಿ ? ’

‘ ಜರ ಬಂದ ಸಂಜೆಗೆ ಮತ್ತೆ ಅಯ್ನರ ಕಡೆ ಹೋದೆ. ಮಾರೆವ್ವ ಹೋಗಿ ಕಾಳವ್ವ ಗಂಟು ಬಿದ್ದಾಳಂತ ಹೇಳಿದರು. ಅದನ್ನ ಕಟ್ಟು ಮಾಡಾಕ ಎಂಟಾಣೆ ರೊಕ್ಕ ಬೇಡಿದರು. ಕೊಟ್ಟೆ. ’

‘ ಹಾ, ನಾನೂ ಅದನ್ನೇ ಹೇಳಿದ್ದು. ಕಾಳವ್ವ ಬರ್ಲೇಬೇಕು. ಅದಿಲ್ಲದೆ ಹೋದರೆ ಅವನ ಜೋಳಿಗೆ ಹೇಗೆ ತುಂಬ ಬೇಕು. ಬಡವರ್ನ ಈ ಭೂತ ಹಾಡ್ಲೇ ಹಗಲೆ ತಿನ್ನಲಿಕ್ಕೆ ಹತ್ತಿವೆ. ಸರ್ಕಾದವರು ರಕ್ತ ಹೀರಿ ಅಷ್ಟಕ್ಕೆ ಬಿಟ್ಟಾರಂದ್ರ ಈ ಭೂತಗಳ ಕಾಟ ಬೇರೆ. ಮೈದೊಗಲು ಎಬ್ಬಿ ತಿನ್ನಲಿಕ್ಕೆ ಬರತಾರ ಈ ಅಯ್ನೋರ ಸೈನ್ಯ. ನಿನಗ ತಿಳೀಲಿಲ್ಲ, ದವಾಖಾನಿಗೆ ಕರ ಕೊಂಡು ಹೋಗಲಿಕ್ಕೆ ? ’

‘ ಅದನೇನು ಹೇಳೋದ್ರಪ್ಪ. ಹೆಸರಿಗೆ ಧರ್ಮಾರ್ಥ ದವಾಖಾನಿ. ಬಡವರ್ನ ಕೇಳೋರು ಎಲ್ಲಿಲ್ಲೂ ಇಲ್ಲ. ಅದ್ರಾಗ ಸಿಗ್ಗಾವಿ ದವಾಖಾನಿ. ಏನು ಮಾಡೋದ್ರಪ್ಪ. ಹೆಂತೀಲಿದ್ದ ನಾಕಾಣೆ ಕೊಟ್ಟು ಹಣ್ಣು ಕೊಂಡು ಮನೀಗೆ ಬರೋವಾಗ.... ’

‘ ಅಳಬೇಡ ಹನುಮಪ್ಪ. ಅತ್ರೇನು ತಿರುಗಿ ಬರ್ತಾನೆ ದುರಗ ? ಮೊದಲೆ ಏನಾದರೂ ಉಪಾಯ ಮಾಡಬೇಕಿತ್ತು. ಆ ಶಾಣ್ಯಾರು, ಈ ಶಾಣ್ಯಾರು, ಆ ಭೂತ, ಈ ಭೂತ ಅಂತ ನೀವು ಹಳ್ಳಿ ಜನ ಕಂಡದ್ದನ್ನೆಲ್ಲ ನಂಬಿಕೊಂಡು ಹತ್ತು ಕೆರಿ ನೀರು ಕುಡಿದು ಸತ್ತು ಹೋಗ್ಲಿಕ್ಕಷ್ಟೆ ಶಾಣ್ಯಾರು. ಹ್ಞೂ ಅಂತ ದುಡಿದು ಮೈನೋವು ಮಾಡಿಕೊಂಡು ಉಪವಾಸ ಮಲ

ಗೋದು ಮಾತ್ರ ಬಲ್ಲಿರಿ. ಇಲ್ಲಿ ನೋಡು ಹನುಮವ್ವ, ಇನ್ನು ಮೇಲೆ ಅಳ ಬೇಡ. ಆ ಒಂದು ಹೆಣ್ಣು ಕೂಸು ಜೋಪಾನ ಮಾಡಿಕೊಂಡು ಸುಖ ವಾಗಿರು. ಅದೇ ಧರ್ಮ ಅಂತ ತಿಳಿದುಕೊ. ಅದೇ ಕರ್ಮ ಅಂತ ಭಾವಿಸು. ಅದರ ಮೇಲೆ ನಂಬಿಗೆಯಿಟ್ಟು ಗಂಡನ್ನ ಮರೀಬೇಕು.'

'ಎಪ್ಪ, ಹೊಟ್ಟೆ ಉರೀತೇತಿ. ಅವನ ದಿನಕರ್ಮ ಮಾಡಲಿಕ್ಕೆ ನಾಕು ಕಾಸು ಕೂಡ ಇದ್ದಿಲ್ಲ.'

'ಏನಂತೀದಿ ಹುಚ್ಚೀ. ದುರಗ ದಿನಾ ಗೋಡಿಕಟ್ಟಿ ಒಂದು ರೂಪಾಯಿ ಸಂಬಳ ತರತಿದ್ದ. ಇಪ್ಪತ್ತು ವರುಷ ಏನಿಲ್ಲೆಂದರೂ ಆದುವು ಅವ ದುಡೀಲಿಕ್ಕೆ ಹತ್ತಿ. ಏನೂ ಸಂಪಾದನೆ ಮಾಡಿಲ್ಲೇ?'

'ನನ್ನ ಹಡೆದಪ್ಪ. ನಿಮ್ಮನ್ನ ನೆನಿಸಿ ಹೇಳ್ತೇನಿ. ಇಸ ಕುಡಿದೇನಿ ಅಂದ್ರ ಒಂದು ಕಾಸಿಲ್ಲ. ಗಳಿಕಿ ಮಾಡ್ಬೇಕು ಅನ್ನೋದು ಅವಗ ಕನಸು ಮನಸ್ನಾಗ ಕೂಡ ಇಚಾರ ಬಂದಿದ್ದಿಲ್ಲ. ಜ್ಯೋತಿಷ್ಯ, ಭಕತಿ ಅಂದ್ರ ಅವಗ ಪಂಚಪ್ರಾಣ. ಕೈ ನೋಡಿದವರಿಗೆಲ್ಲ ಕೈಕೂಲಿ ಖರ್ಚಾಗ್ತಿತ್ತು. ಹೀಂಗಾಗಿ ಗಳಿಕಿ ಇಲ್ಲ ತಂದೆ.'

'ಹನುಮವ್ವ, ಜ್ಯೋತಿಷ್ಯದಾಗ ಅವಗ ನಂಬಿಕೆ ಇರಲಿ ಬಿಡಲಿ. ಅವ ಕೆಟ್ಟದ್ದು ಆದಕ ಅಂತ ನಾನು ಅನ್ನೋದಿಲ್ಲ. ನಂಬಿಗಿ ಅನ್ನೋದನ್ನ ಅವ ಗುತ್ತಿಗೆ ಹಿಡಿದಿದ್ದ ಅಂತ ತೋರ್ತದೆ. ಇಲ್ಲಿ ಅವನಿಗೆ ಶಿಕ್ಷಾ ಆದ್ರೇನು? ಮೋಕ್ಷ ಎನ್ನುವುದು ಇದ್ದರೆ ದುರಗನಂಥವರಿಗೆ ಮೀಸಲಾಗದಿದ್ದರೆ ಅದು ಇದ್ದೇನು ಫಲ! ಏನೇ ಇರಲಿ. ದುರಗನ್ನ ನಾನು ಸಾಮಾನ್ಯ ಅಂತ ತಿಳಿದುಕೊಂಡಿಲ್ಲ. ನಿಮ್ಮ ಜಾತೀಲಿ ಹುಟ್ಟಬಾರದಿತ್ತು ಅವ. ಆದರ ನನಗೇನು, ಎಲ್ಲಾ ಜಾತೀನು ಒಂದೆ. ಆ ಹಿರೇರು ಮಾಡಿದ ನಾಲ್ಕು ಜಾತಿ ಈಗ ಕೊಳೆತ ಹೆಣದಂಗ ನಾರಲಿಕ್ಕೆ ಹತ್ತ್ಯಾವ. ದುರಗನ್ನ ನಾನು ಯೋಗಿ ಅಂತೀನಿ. ನನ್ನ ತಮ್ಮ ಶಿವ ಹಗಲೆಲ್ಲ ದುರಗನ ಹೆಸರು ಹೇಳಿ 'ಎಂಥ ಜೀವ' ಎನ್ನುತ್ತಿದ್ದ. ಆದ್ರೇನು ಮಾಡೋದು? ಇಬ್ಬರೂ ತಿರುಗದ ದಾರಿ ಹಿಡಿದು ಹೋಗಿದ್ದಾರೆ. ದುರಗ ನಿಜವಾಗಿಯೂ ಯೋಗಿ. ಅವ ಸತ್ತರೇನು? ನನ್ನ ಪಾಲಿಗೆ ಆತ ಬದುಕಿದ ಹಾಗೆಯೆ. ನನಗೆ ಬೇಕೂ ಅಂದ್ರ ಅವನ್ನ ಕಾಣಬಲ್ಲೆ. ಅವನ ಕೂಡ ಮಾತನಾಡಬಲ್ಲೆ. ಆತ ತುಳಿದ ದಾರಿ ನಾನು ತುಳಿದು ಬದುಕಬೇಕಾಗಿದೆ'

'ಎಪ್ಪಾ, ಹೋಗ್ತೇನಿ. ನಿಮ್ಮ ಮಾತು ಕೇಳಿ ದುಃಖ ಮರಿತೇನಿ'

'ಹಾ, ಹೋಗು ಹನುಮಪ್ಪ. ಮುರಗಾ . . . ?'

' . . . . . '

'ನಿಜವಾಗಿಯೂ ನೀನು ಯೋಗಿ. ಕಾಡಿನ ಹೂವಿನಂತೆ ಲೋಕದಲ್ಲಿ ಅರಳಿ ಅಡಗಿದೆ. ನಮ್ಮ ದೇಶ ನಿಮ್ಮಂಥ ಯೋಗಿಗಳಿಂದ ಪುನೀತವಾಗಿದೆ. ಹುಲ್ಲು ತಂದವರ ಮುಂಡಿಗೆ ಹುಸ್ನ ತರುವಿರಿ.'

"ತಂದೆ, ನನಗೊಂದು ತಿಳಿಯದು. ಯೋಗಿ ಗೀಗಿ ಏನು ಎನ್ನುವದು ನನಗೆ ಒಂದೂ ತಿಳಿಯದು. ಇಪ್ಪತ್ತು ವರುಷ ಕಲ್ಲು ಹೊತ್ತು ಮಣ್ಣು ಮಿದ್ದಿ ಧನಿಕರಿಗೆ ನೆಳಲು ಮಾಡಿಕೊಟ್ಟೆ. ನಾವು ತಡೆಗಟ್ಟಿ ನಿಂತಾಗ ನನ್ನೆಡೆಗೆ ಒಬ್ಬರೂ ಕಣ್ಣೆತ್ತಿ ನೋಡಲಿಲ್ಲ. ನಿಮ್ಮನ್ನು ನೆನೆದೆ. ನೀವು ಊರಲ್ಲಿರಲಿಲ್ಲ. ನಿಮ್ಮ ತಮ್ಮಂದಿರನ್ನು ನೆನೆದೆ. ನನಗಿಂತಲೂ ಮೊದಲು ಅವರು ಈ ಮನೆ ಬಿಟ್ಟು ಆ ಮನೆಗೆ ಹೋಗಿದ್ದರು. ಆ ಮನೆ ಯಾರಿಂದಲೂ ಕಟ್ಟಬಾರದು. ಅಂಥ ಮನೆ ನಿಮ್ಮ ತಮ್ಮ ಬಯಸಿ ಅಲ್ಲಿಗೆ ಹೋದರು. ಮೊನ್ನೆ ಅವರನ್ನು ಕಂಡಾಗ 'ಈಗಲಾದರೂ ಸುಖವಾಗಿರು ದುರಗಪ್ಪ' ಎಂದರು.

"ಪ್ರಪಂಚದಲ್ಲಿ ಬದುಕಿರುವಾಗ ಸುಖವೆನ್ನುವುದಿದೆಯೋ ಎಂದು ಮಣ್ಣು ಕೆದರಿ ನೋಡಿದೆ. ನೆಲ ಬಗಿದು ನೋಡಿದೆ. ಎಲ್ಲೆಲ್ಲೂ ಉಪ್ಪು ನೀರಿನ ಸೆಲೆ ಊರಿ ಬರುತ್ತಿತ್ತು. ಮುಟ್ಟಿದ ಬಳ್ಳಿ ಹಾವಾಗುತ್ತಿತ್ತು. ನೆಳಲು ನೋಡಿ ಆಶ್ರಯಕ್ಕಾಗಿ ಹಾತೊರೆವರೆ ವಿಷದ ತೊಟ್ಟು ಮೇಲಿನಿಂದ ಬೀಳಬೇಕು. ಇಂಥ ಬದುಕನ್ನು ಯಾವುದೋ ಒಂದು ಆಸೆಯ ಅಮೃತ ಮಂತ್ರ ಹಿಡಿದು ನೂಕಿದೆ. ಬೆನ್ನು ಕುಸಿದು ಬೀಳುವವನಕೂ ನೂಕಿದೆ. ಕೊನೆಗೂ ಬರಿ ಬಯಲೇ ಕಂಡಿತು. ಗುರಿ ಸಾಧಿಸಲಿಲ್ಲ. ಸಾಧಿಸಲಿ ಎಂತ ಭಗವಂತನಲ್ಲಿ ಪ್ರಾರ್ಥಿಸಿದೆ. ಹಾಲಕ್ಕಿಯ ಹಾಡು, ಗೂಗೆಯ ಜೋಗುಳ ಭಗವಂತನ ಸಂದೇಶವನ್ನು ಬೀರುವವೆಂದು ಎಲ್ಲರಲ್ಲಿಯೂ ಮಮತೆಯಿಂದಲೂ, ಭಯಭಕ್ತಿಯಿಂದಲೂ ನಡೆದುಕೊಂಡೆ. 'ನೀನೇ' ಎಂದು ಲೋಕದೊಡೆಯನನ್ನು ಪ್ರಾರ್ಥಿಸಿ ಅಂಜಲಿಯೊಡ್ಡಿ ನಿಂತಾಗ

ಹಾಲಾಹಲ ಹರಿದು ಬರುತ್ತಿತ್ತು. ಒಡೆತನಕ್ಕಾಗಿ, ಸಂಪಾದನೆಗಾಗಿ ಒಂದು ದಿನವೂ ಆಸೆ ಮಾಡಲಿಲ್ಲ. ಹೆಂಡತಿ ಮಕ್ಕಳ ಮೇಲಿನ ಆಸೆಯನ್ನು ಎಂದೋ ಕಿತ್ತೊಗೆದಿದ್ದೆ. ದಿನದ ಕೈಕೂಲಿ ದಿನಕ್ಕೇ ವ್ಯಯವಾಗುತ್ತಿತ್ತು. ಜಗದೊಡೆಯನನ್ನು ಧ್ಯಾನಿಸುತ್ತಲೇ ಆ ಪ್ರಪಂಚ ಬಿಟ್ಟು ಇಲ್ಲಿಗೆ ಬಂದೆ.

"ನನ್ನ ಬದುಕಿನ ರೀತಿ ಇದು. ಹುಟ್ಟಿದಂದಿನಿಂದ ಆಚಾರ್ಯ ಕುಲದಲ್ಲಿ ನಂಬಿಗೆ ಹಿಡಿದು ಬೆಳೆದೆ. ಉತ್ತಮ ಕುಲದಲ್ಲಿ ಹುಟ್ಟಿದವರೆಂದು ಅವರನ್ನು ಭಕ್ತಿಯಿಂದ ಪೂಜಿಸಿದೆ. ಆದರೆ ಆಚಾರ್ಯರು ಮುಸುಕಿನಲ್ಲಿ ಗುರಿಯಿಟ್ಟು ಕವಣೆಗಲ್ಲು ಬೀಸಿದರು. ಶಾಸ್ತ್ರ ಎಂದು ನುಡಿದು ಹೊಟ್ಟೆ ಹೊರೆವುದಕ್ಕೆ ಭಾಷ್ಯ ಹೇಳಿ ಅಜ್ಞಾನದ ಕೊಳ್ಳದಲ್ಲಿ ನೂಕಿದರು. ಒಂದು ದಿನ ಈ ಊರಿನ ಅಯ್ಯನವರ ಮನೆಗೆ ಶ್ರೇಷ್ಠ ತರಗತಿಯ ವಿರಕ್ತರೆಂದು ಹೇಳಿಕೊಳ್ಳುವವರೊಬ್ಬರು ಬಂದಿದ್ದರು. ನನ್ನ ಗುಡಿಸಲವರೆಗೆ ಬಂದು ಭಿಕ್ಷೆಯನ್ನು ಸ್ವೀಕರಿಸಬೇಕೆಂದು ಅವರಿಗೆ ಬಿದ್ದು ಬೇಡಿಕೊಂಡೆ. 'ಶೂದ್ರನ ಮನೆಗೆ ಬರಲಾಗದು. ಭಿಕ್ಷೆ ಇಲ್ಲಿಗೆ ಬರಲಿ' ಎಂದು ನನ್ನನ್ನು ಹೊರಗೆ ಹಾಕಿದರು. ಅದರಿಂದ ನಾನು ನೊಂದು ಕೊಳ್ಳದೆ ಊರಿನ ಅಯ್ಯನವರ ಮೇಲೆ ಎಂದಿನಂತೆ ವಿಶ್ವಾಸವಿಟ್ಟೆ. ಅವರಿಗೆ ಎಂದಿನಿಂದಲೂ ದುಡ್ಡಿನ ಆಸೆ.

"ಒಂದು ದಿನ ಮುಂಜಾನೆ ನನ್ನ ಗುಡಿಸಲಿಗೆ ಬಂದು ಕೂಗಿದರು. ಕಾಲಿಗೆ ನೀರನಿತ್ತು ಕುಳ್ಳಿರಿಸಿದೆ. ಕಿವಿಯನ್ನು ಹತ್ತಿರ ತಾ ಎಂದರು. ನಮ್ಮೀ ಪಕ್ಕೆ ಬಾ ಎಂದರು. ಶಿವನ ಮೂರ್ತಿಯನ್ನು ಕಟೆದು ತಂದು ಕಂಠದವರೆಗೆ ಹಿತ್ತಿಲಲ್ಲಿ ಹೂಳು ಎಂದರು. ಅರ್ಥ ನನಗೆ ಹೊಳೆಯಲಿಲ್ಲ. ಮೂರ್ತಿಯನ್ನು ಕಟೆದೆ. ಮಧ್ಯಾಹ್ನವಾಗಿತ್ತು. ಅಯ್ಯನವರ ಮನೆಗೆ ಹೋದಾಗ ಅವರು ಗಂಟೆಯ ಸಪ್ಪಳ ಮಾಡುತ್ತ ಶಿವಧ್ಯಾನದಲ್ಲಿ ಮಗ್ನರಾಗಿದ್ದರೆಂದು ತೋರುತ್ತದೆ. ಅವರು ತೋರಿಸಿದ ತಾಣವನ್ನು ಅಗೆಯಲೆಂದು ಹಿತ್ತಿಲಲ್ಲಿ ಬಂದೆ. ಜಾಗ ನೋಡಿ ಕಚ್ಚು ಹಾಕಿದೆ. ಸುಮಾರು ನಾಕು ಗೇಣು ತಗ್ಗು ಏರಿರಬಹುದು. ಗುದ್ದಲಿ ಹಾಗೆಯೇ ನಾಗಿತ್ತು. 'ಝುಣ್' ಎಂಬ ಸಪ್ಪಳ ಒಮ್ಮೆಲೆ ಕಿವಿಯನ್ನು ಸೇರಿತು. ಅಷ್ಟರಲ್ಲಿಯೆ ಗಂಟೆಯನ್ನು ಬಿಸಾಟು ಪೂಜೆಯನ್ನು ನಿಲ್ಲಿಸಿ ಹಾಗೆಯೆ ಅಯ್ಯನವರು ಹಿತ್ತಿಲಿಕ್ಕೆ ಓಡಿ ಬಂದರು. ಆಗ

ಮತ್ತೊಮ್ಮೆ ಗುದ್ದಲಿಯೇಟು ಹಾಕಿದೆ. ಹೊನ್ನ ಕೊಡ ಮೇಲೆಯೆ ತೋರಿತು. ಹೌರಾಗಿ ಅದನ್ನು ಒಳಗೆ ಸಾಗಿಸಿದರು. ಆ ತಗ್ಗಿನಲ್ಲಿ ಶಿವನ ಮೂರ್ತಿಯನ್ನು ತಲೆಯವರೆಗೆ ಹೂಳಿಸಿದರು. ಸಂಜೆಗೆ ಊರಲ್ಲೆಲ್ಲ ಸುದ್ದಿ ಹಬ್ಬಿತ್ತು.

ಊರ ಸುತ್ತುಮುತ್ತಲಿನ ಜನರೆಲ್ಲರೂ ಚಕ್ಕಡಿ ಹೂಡಿಕೊಂಡು ತಂಡ ತಂಡವಾಗಿ ಬರತೊಡಗಿದರು. ಅಯ್ಯನವರ 'ಮಹಿಮೆ' ಯೆಂದು ಹೊನ್ನು ಕೊಟ್ಟು ಆಶೀರ್ವಾದ ಬೇಡಿದರು. 'ಭಗವಂತ, ಭಗವಂತ ನಿನ್ನ ಕೃಪೆ' ಎನ್ನುತ್ತ ಭಕ್ತರನ್ನು ಹರಿಸಿದರು. ಅಯ್ಯನವರು ತಮ್ಮ ಮೊದಲ ಮುರುಕ ಮನೆಗೆ ಹೇಸಿದರು. ಮತ್ತೆ ನನ್ನನ್ನು ಕರೆದು ಇನ್ನೊಂದು ಹೊಸ ಮನೆಗೆ ಪಾಯ ತೋರಿಸಿದರು. ಗಚ್ಚಿನ ಮನೆ ಏರಲಿ ಎಂದರು. ಹೊನ್ನು ತುಂಬಲು ಗೋರಿ ಪೂಳ್ಯಾಗಿರಲಿ ಎಂದರು. ಸ್ಪೇಹೊಂದು ಹಗುರಾದ ಮಣ್ಣಿನ ದೇವರಿದ್ದರೆ ಸಾಕು ಎಂದರು ಈ ಮೊದಲಿಗೆ ಹೂಳಿಟ್ಟಿದ್ದ ಶಿವನ ಮೂರ್ತಿಯನ್ನು ಅಲ್ಲಿಂದ ಎಬ್ಬಿಸಿ ಸೇರುಪಾಲು ಮಾಡಿಬಿಡು ಎಂದರು. ಅವರ ಆಜ್ಞೆಯಂತೆ ನಡೆದುಕೊಂಡೆ. ಈ ವರೆಗೂ ಅವರನ್ನು ನಾನು ಓಲೈಸಿದುದು ನಿಷ್ಠೆಯಿಂದ, ನಂಬಿಕೆಯಿಂದ. ಅದೇ ದಿನ ರಾತ್ರಿ ಕನಸು ಕಂಡೆ.

"ಕನಸಿನಲ್ಲಿ ನಿಮ್ಮ ತಮ್ಮ ಬಂದು 'ದುರಗಪ್ಪ, ನೀನು ಹಂಬಲಿಸಿದ ವಸ್ತು ನಿನಗಾಗಿ ಕಾದು ನಿಂತಿದೆ' ಎಂದು ನುಡಿದು ಕಾಣದಾಗುವಷ್ಟರಲ್ಲಿ ವಿಚಿತ್ರ ವ್ಯಕ್ತಿಯೊಂದನ್ನು ಕಂಡೆ. ಮೈತುಂಬ ಜಡೆಗಟ್ಟಿ ಬೆಳೆದ ಕೂದಲು. ಜಡೆಯಲ್ಲಿ ಭೋರಿಡುವ ಹಾವು. ಜಡೆಗೆ ಮುಡಿಪಾಗಿ ನಿಂತ ಚಂದಿರ. ತಲೆಯ ಮೇಲೆ ಕೈ ಹಿಡಿದಾಕೆ, ತಾಯ ಮುಡಿಯಿಂದ ಭೂಲೋಕದೆಡೆಗೆ ಧಾವಿಸುತ್ತಿರುವ ಗಂಗೆ. ಆ ವ್ಯಕ್ತಿಯ ಒಂದು ಕೈಯಲ್ಲಿ ತ್ರಿಶೂಲ, ಇನ್ನೊಂದರಲ್ಲಿ ನರಕಪಾಲ. ಹುಲಿದೊಗಲು ಹೊದಿಕೆ. ಕಂಠದಲ್ಲಿ ಏನೋ ಕಪ್ಪು. ಇದನ್ನೆಲ್ಲ ನೋಡುತ್ತಲೇ ಮೈ ಬೆವರೊಡೆಯಿತು. ವ್ಯಕ್ತಿ 'ನಡುಗದಿರು' ಎಂದು ನುಡಿದು ಅಭಯ ಹಸ್ತ ಎತ್ತಿ ನಗೆಮುಖದೋರಿತು. 'ಹಾ

ನನ್ನೊಡೆಯ' ಎಂದು ಅಡ್ಡಬೀಳುತ್ತಿರುವಾಗಲೆ ಆ ವ್ಯಕ್ತಿ ಕಲ್ಲಾಗಿಬಿಟ್ಟಿತು. 'ನನ್ನನ್ನು ಹೀಗೆ ಮಾಡಿದಾರೆ' ಎಂಬ ನುಡಿ ಎಲ್ಲಿಂದಲೋ ಕೇಳಿ ಬಂದಿತು. ಇದನ್ನೆಲ್ಲ ನೋಡುತ್ತಲೆ ದಿಙ್ಮೂಢನಾಗಿ ನಿಂತೆ. ಆಕಾಶದಿಂದ 'ಧೋ' 'ಧೋ' ಎಂದು ನೀರು ಸುರಿಯತೊಡಗಿತು. ಇದನ್ನು ಕಂಡ ಮರುದಿನ ನಾನು ಹಾಸುಗೆ ಹಿಡಿದೆ.

"ಹಾಸುಗೆ ಹಿಡಿದು ಎರಡು ದಿನ ಪೂರ್ತಿಯಾಗಿರಲಿಲ್ಲ. ನನ್ನಾಕೆ ಅಲ್ಲಲ್ಲಿ ಓಡಾಡಿ ಕಷಾಯ ತರುವ ಎತ್ತುಗಡೆ ಮಾಡಿದಳು. ಅಯ್ಯನವರನ್ನು ಕಂಡು ಭವಿಷ್ಯ ಕೇಳುವುದಕ್ಕೆ ಹಾತೊರೆದಳು. ಅದನ್ನು ನೋಡಿ ನಾನು ಮನದಲ್ಲಿಯೇ ನಕ್ಕೆ. ಕಾರ್ಯ ಕೈ ಮೀರಿದ ಮೇಲೆ ಯತ್ನಿಸಿ ಫಲವಿಲ್ಲ ಎಂದುಕೊಂಡೆ. ಆಕೆ ಕಂಡವರ ಕಾಲುಬಿದ್ದು ಕಾಪಾಡಿಕೊಳ್ಳಿರೆಂದು ಬೇಡಿ ಕೊಂಡಳು. ಎಲ್ಲೆಲ್ಲೂ ವಂಚನೆ! ವಂಚನೆ! ಮಲಗಿಕೊಂಡಲ್ಲಿಯೇ ಜಗದ ಮರ್ಮವನ್ನು ಅರಿತುಕೊಂಡೆ. ಅವಳು ಎಲ್ಲಿಯೋ ಹೊರಗೆ ಹೋಗಿದ್ದಳು. ಅವಳು ತಿರುಗಿ ಬರುವಷ್ಟರಲ್ಲಿ ಇಲ್ಲಿಗೆ ಹೊರಟು ಬಂದೆ.

"ಈಗ ನೋವು, ನಿರಾಸೆ, ವಂಚನೆ ಹತ್ತಿರ ಬಾರವು. ಭಗವಂತನೆದುರಿ ನಲ್ಲಿ ನನ್ನ ದಿನದ ಹೋರೆ ಸಾಗುತ್ತಿದೆ.

"ಜೀವನ ದೇವನಿಚ್ಛೆಗೆ ಸರಿಯಾಗಿ ಚಿಗಿಯುತ್ತದೆ, ಹೂ ಬಿಡುತ್ತದೆ, ಹಣ್ಣು ಕೊಡುತ್ತದೆ. ಮಾಗಿ ಅಷ್ಟೆ. ಬೇಗೆ ಅಷ್ಟೆ. ಬಾಳಿನ ಮರವೇ ಆತನಿಗೆ ಮೀಸಲು.

"ಇಲ್ಲಿ ನೋಡಿ. ಇದೇ ಮರದಡಿಯಲ್ಲಿ ಒಂದು ದಿನ ನಾನು, ನಿಮ್ಮ ತಮ್ಮ ಶಿವ ಕುಳಿತಿದ್ದೆವು. ಜತೆಗೆ ನೀವೂ ಇದ್ದಿರಿ. ಗಾಳಿ ಎಲ್ಲಿಂದಲೋ ಬಂದು ಮರದಲ್ಲಿ ಮಾಯವಾಗಿ ನಮಗೆ ಕೇಳುವಂತೆ ಕೂಗಿ ಹೇಳಿತು. 'ಬಾಳು ಒಂದು ಮರ. ಮರದಂತೆ ನೀವು ಯೋಗಿಗಳಾಗಬೇಕು' ಎಂದಿತು.

ನಾವು ಒಬ್ಬರನ್ನೊಬ್ಬರು ನೋಡಿದೆವು. ಇದೇ ಮರ ಅಂದು ಸಾಕ್ಷಿ ಹೇಳಿದಂತೆ ಈಗಲೂ ಹೇಳುತ್ತಿದೆ. ಆಗ ಚಳಿ, ಈಗ ಮಂಜು. ಇಲ್ಲಿ ನೋಡಿ, ಇದೇ ಮರ ಸಾಕ್ಷಿ. ”

ದುರಗ ತೋರಿದ ಸಾಕ್ಷಿದಾರನೆಡೆಗೆ ನೋಡಿದೆ. ‘ ನಾನು ಯೋಗಿ ’ ಎಂದು ಮರ ಕೂಗುತ್ತಲೆ ಎಲೆಗಳನ್ನು ಬಳಬಳ ಸುರಿಸಿತು. ಅತ್ತಿತ್ತ ನೋಡಿದೆ. ಹೆನುಮವ್ವ ಮನೆ ಹಾದಿ ಹಿಡಿದಿದ್ದಳು. ದುರಗ ಇರಲಿಲ್ಲ. ನನ್ನ ತಮ್ಮ ಇರಲಿಲ್ಲ.

ಎದುರಿಗಿದ್ದ ಮೋಟು ಮರವನ್ನು ಕಣ್ಣು ತುಂಬುವನಕ ನೋಡಿದೆ. ಹೃದಯ ತುಂಬುವನಕ ನೋಡಿದೆ. ಆಗ ಚಿಗಿತಮರ ಈಗ ಮೋಟಾದುದನ್ನು ಕಂಡು ‘ ಕರ್ಮಯೋಗಿಗೆ ನಮಸ್ಕಾರ ’ ಎನ್ನುತ್ತ ಹೊರಟು ಬಂದೆ.

---

# ಕಲ್ಲುಗಳ ಕಂಬನಿ

ಇದೇ ಶಾಲೆಯಲ್ಲಿ ಅಕ್ಷರು ಕಲಿತೆ. ಓರಗೆಯ ಗೆಳೆಯರನ್ನು ಕಟ್ಟಿಕೊಂಡು ಆಟಪಾಟವಾಡಿದೆ. ಹಳ್ಳದೋರೆಯ ತಿಳಿ ಮಣ್ಣು ತಂದು ಗುಂಡು ಗೋಲಿಗಳನ್ನು ಮಾಡಿ ಮುಂಜಾವಿನಿಂದ ಸಂಜೆಯವರೆಗೆ ಬಳಲಿಕೆಯ ನೀಗಿ ಆಟವಾಡುತ್ತ ಸುಖಿಸಿದೆ. ಬಾಲ್ಯದ ಸುಖಮಯ ಕನಸುಗಳನ್ನು ಇಲ್ಲಿ ಕಟ್ಟಿ ಕಾಣಬಾರದ ಚೆಲುವು ಕಂಡೆ. ಯಾವ ಆಡಂಬರ ಜೀವನಕ್ಕೂ ನನ್ನ ಮನಸ್ಸು ಹರಿಯಗೊಡದೆ ವಿಶ್ವಾಸದಿಂದ ತನ್ನ ಮಡಿಲಲ್ಲೆತ್ತಿಕೊಂಡು ತುಂಬು ಜೀವನದ ತಿರುಳನ್ನು, ಉದಾತ್ತ ಜೀವನದ ರಹಸ್ಯವನ್ನು ಹೇಳಿ ಕೊಟ್ಟ ನನ್ನ ಶಾಲೆಗೆ ಇಂದು ಏನು ಗತಿ........ ?

ಅಂದು ನಾನು ಓದು ಸುರುವು ಮಾಡಿದಾಗ ಶಾಲೆ ತುಂಬಿ ತುಳುಕುತ್ತಿತ್ತು. ಓದುವ ಎಳೆಯರ ಮೆಲ್ಲುಲಿಗೆ ಹರಿವ ಗಾಳಿಯು ಬಂದು ಮುತ್ತನೀಯುತಿತ್ತು. ಶಿಕ್ಷಕರ ಕಣ್ಣು ತಪ್ಪಿಸಿ ನಾವು ಬಳಪದಾಟ ನಡಸಿದಾಗ ಮಧ್ಯದಲ್ಲಿ ಉಂಟಾಗುವ ಸೋಲು ಗೆಲವುಗಳನ್ನು, ರೋಷ ಆನಂದಗಳನ್ನು, ಶಾಲೆಯ ಗೋಡೆಯಲ್ಲಿ ಅಡಗಿ ನಿಂತ ಕಲ್ಲು ಪಡೆಗಳೂ ನೋಡಿ ಸಂತೋಷ ಪಡುತ್ತಿದ್ದವು. ಮುಂದಿನ ಕಾಲಕ್ಕೂ ಅಂತಹ ಸುಖಮಯ ಸನ್ನಿವೇಶಗಳು ಒದಗಿ ಬರಬಹುದೆಂದು ಅಂದು ಇಟ್ಟುಕೊಂಡ ನನ್ನ ನಂಬುಗೆ ಇಂದು ಹುಡಿ ಪುಡಿಗುಟ್ಟಿತಲ್ಲ !

ಮುಂಜಾವಿನಲ್ಲಿ ಚಳಿಬಿಟ್ಟಾಗ ನಡುಗುತ್ತ ಕಡಲೆ ಹುರುಳಿಗಳನ್ನು ಜೇಬಿನಲ್ಲಿ ತುಂಬಿಕೊಂಡು ಬಾಯಾಡಿಸುತ್ತ ಶಾಲೆಗೆ ಬಂದಂದು ಗುಬ್ಬಿ ಗೊರವಂಕಗಳು ಸುತ್ತಲೂ ಚಿಲಿಪಿಲಿಗುಟ್ಟುತ್ತ ಮಣ್ಣಿನಲ್ಲಿ ಹುಳಗಳನ್ನು, ಬಿದ್ದ ಕಾಳುಗಳನ್ನು ಆರಿಸುತ್ತಿದ್ದವು. ಸೃಷ್ಟಿಯಲ್ಲಿ ಚೇತನವನ್ನು ಕಂಡ ನಾವು, ಹಕ್ಕಿಗಳಲ್ಲಿ ಜೀವನದ ಸಾಫಲ್ಯತೆಯನ್ನು ಗುರುತಿಸಿದ ನಾವು ಜೇಬಿನಲ್ಲಿದ್ದ ಕಾಳುಗಳನ್ನು ಭೂಮಿಯ ಮೇಲೆ ಹರಹುತ್ತಿದ್ದೆವು. ತಾಯಿ

ಭೂದೇವಿಗೆ ಅವರಿಂದ ಹರುಷವಾಗುತ್ತಿರಬೇಕು. ಎಂತಲೇ ಹಕ್ಕಿ ಹಾಡುತ್ತಿದ್ದವು. ಸಂಜೆ ಓದು ಮುಗಿಸಿ ಮನೆಗೆ ಹೊರಡುವ ಮುನ್ನ ನಾವೆಲ್ಲ ಕೂಡಿ ಸರಗೆರೆಯನ್ನಾಡುತ್ತಿದ್ದೆವು. ಈ ಮರಗಳ ತುದಿಯನ್ನೇರಿ ಕುಳಿತು ಹಕ್ಕಿಗಳು ನಮ್ಮಾಟವನ್ನು ನೋಡಿ ಆನಂದದ, ಉದ್ಗಾರಗಳನ್ನು ವ್ಯಕ್ತಪಡಿಸುತ್ತಿದ್ದವು. ಅಲ್ಲಿ, ಬೇವಲ ಮರದ ರೆಂಬೆಯಲ್ಲಿ ಕುಳಿತ ಮರಕುಟಿಗ ತಾಸಿಗೊಮ್ಮೆ ಸರಿಯಾಗಿ ಕೂಗಿದಾಗ ಏನು ಆನಂದವೋ? ಶಿಕ್ಷಕರು ಹಾಯಾಗಿ ಖುರ್ಚಿಯಲ್ಲಿ ನಿದ್ರೆ ಹೋಗಿದ್ದರೆ ಅವರ ಹತ್ತಿರ ಮೆಲ್ಲನೆ ಹೆಜ್ಜೆ ಇಕ್ಕುತ್ತ ಹೋಗಿ ವೇಳೆಯ ಪರಿಚಯ ಮಾಡಿಕೊಡುವುದೆಮಗೆ ಎಷ್ಟು ಹೆಮ್ಮೆಯ ಮಾತಾಗುತ್ತಿತ್ತಲ್ಲ! ಎಲ್ಲಿ ಹೋಗಿವೆ ಇಂದು ಆ ಹಕ್ಕಿಗಳು!

ಇಲ್ಲೊಂದು ನೀರಿನೊರತೆ ಮಾಡಿದ್ದೆವು. ಅದುವೆ ನಮ್ಮ ಪಾಲಿಗೆ ಹಾಲು ಹೊಂಡವಾಗಿತ್ತು. ದುಡಿಮೆಯ ಹಿರಿಮೆಯನ್ನು ಅರಿತು ನೆಲ ಅಗಿದು ನೀರು ತೆಗೆದೆವು. ಶಿಕ್ಷಕರು ಶಾಲೆಗೆ ಬರುವ ಮುನ್ನ ನಾವೆಲ್ಲ ಬಂದು ಅದರ ದಂಡೆಯ ಮೇಲೆ ಕುಳಿತು ವಿಚಾರವನ್ನು ಮಾಡುತ್ತಿದ್ದೆವು. ಕಾಗದದ ಹರಗೋಲು ಮಾಡಿ ನೀರ ಮೇಲೆ ತೇಲಿ ಬಿಟ್ಟು ಬಾಳಿನ ಆಳಕ್ಕೆ ಲಂಗರ ಹಾಕಿ ನೋಡುತ್ತಿದ್ದೆವು. ಕಲ್ಲೊಗೆದಾಗ ಊರಿ ಬರುವ ಗುಳ್ಳಿಗಳನ್ನು ಕಂಡು ಜಗನ್ನಿಯಾಮಕನ ಇರವಿನ ಬಗೆಗೆ ನೂರು ವಿಚಾರ ಮಾಡುತ್ತಿದ್ದೆವು. ಅಂದು ಕಂಡ ಸತ್ಯ ಸ್ಥಿರವಾಗಿಯೇ ಉಳಿಯುವದೆಂದು ನಮಗೆ ಗೊತ್ತಾಗಲಿಲ್ಲ. ವಿಧಿ ಬರೆದ ಮಾಯೆ!

ಹಬ್ಬ ಹುಣ್ಣಿಮೆ ಬಂದಾಗ ಉಕ್ಕಿ ಬಂದ ನಮ್ಮ ಉತ್ಸಾಹವನ್ನು ಈ ಶಾಲೆಯ ಗೋಡೆಗಳು, ತೊಲೆಗಳು, ಕಿಡಿಕಿಗಳು, ಕವಾಟುಗಳು—ಎಲ್ಲಾ ಅರಿತುಕೊಳ್ಳುತ್ತಿದ್ದವು. ಶಾರದೆಯ ಪೂಜೆ, ಗಣಪತಿಯ ಹಬ್ಬ, ದೀವಳಿಗೆ ಉತ್ಸವ, ಗೌರಿ ಹುಣ್ಣಿಮೆ—ಇನ್ನೇನನ್ನು ಕಾಣಲಿಲ್ಲ ಇವು? ಕಲ್ಲುಗಳಿಗೂ ಕುಂಕುಮ ಗಂಧ ಹಚ್ಚಿದೆವು. ಗಾಳಿ ಬೆಳಕಿಗೂ ಲೋಬಾನ ಮುಡಿಸಿದೆವು. ಎಷ್ಟೆಂದು ನೆನಪಿಗೆ ತಂದುಕೊಳ್ಳಲಿ ಆ ದಿನಮಾನಗಳನ್ನು!

ಈ ವಿಷನಿಮಿಷ ಏಕೋ? ಏಕಿಲ್ಲ. ನನ್ನ ಶಾಲೆಯ ಗೋಡೆಗಳು ಬಿದ್ದು ಹೋಗಿವೆ. ಕಲ್ಲುಗಳು ಉರುಳುರುಳಿ ಬಿದ್ದಿವೆ. ಕವಾಟುಗಳಿಗೆ

ಘಟನೆಯೊ ಎಂದು ನಾವೆಲ್ಲ ಕಣ್ಣುಬಿಟ್ಟು ನೋಡಿದೆವು. ಕೆಲ ಕಾಲದ ಮೇಲೆ ತುಸು ಮಾತನಾಡಿದರು. ಆಗ ಸಮಾಧಿಯಿಂದ ಎಚ್ಚತ್ತು ಬಂದಂತೆ ತೋರಿದರು. ಹೌದು. ಅವರು ನುಡಿದ ಮಾತಿನಲ್ಲಿ ನಿಶ್ಚಲತೆ ನೆಲಸಿತ್ತು; ನಿರ್ಮೋಹವಡಗಿತ್ತು.

ಇದಿರಿಗಿದ್ದ ಇದೇ ಕಿಡಿಕಿಯನ್ನು ಮುಚ್ಚು ಹೇಳಿದರು. ಅವರು ಕುಳಿತಲ್ಲಿಂದ ಈ ಕಿಡಿಕಿಯಲ್ಲಿ ನೋಡಿದರೆ ಸುಡುಗಾಡು ಕಾಣುತ್ತಿತ್ತು. ನಮಗೆ ಅವರು ಹೇಳಿದ ಮಾತಿನ ಅರ್ಥ ಬೇಗ ಗೊತ್ತಾಗಲಿಲ್ಲ. ಕಿಡಿಕಿಯ ಬಾಗಿಲ ಮುಚ್ಚಿದೆವು. ಮುಂದೆ ಅದು ತೆರೆದುದನ್ನು ನಾನು ನೋಡಲೇ ಇಲ್ಲ.

ಯಮನಿಗೊಬ್ಬನಿಗೇ ಕರುಣೆ ಇಲ್ಲವೆಂದು ತಿಳಿದಿದ್ದೆ. ಆದರೆ ಪಶುತ್ವಕ್ಕಿಳಿದ ಮನುಷ್ಯರನ್ನು ಕಂಡೆ. ಯಮನಿಗಿಂತಲೂ ಕಠಿನ ಹೃದಯಿಗಳನ್ನು ನೋಡಿದೆ. ಏನು ಈ ಮಾತಿನ ಅರ್ಥ ?

ಏನಿಲ್ಲವಪ್ಪ ! ಶಿಕ್ಷಕರನ್ನು ಮತ್ತೊಂದು ಊರಿಗೆ ವರ್ಗ ಮಾಡಿದರು, ಅಷ್ಟೆ.

ಅದರ ಪರಿಣಾಮ ಏನು ? ಹೋ ! ಸಾಕಷ್ಟು ಆಯಿತು. ಈ ಶಾಲೆಯಲ್ಲಿ ಓದು ನಡಸಿದ ನಮ್ಮೆಲ್ಲರ ಹೃದಯ ತರತರನೆ ನಡುಗಿದವು. 'ಮಾದಿ' ತುಂಬಿ ಬಂದು ತನ್ನ ದುಃಖವನ್ನು ವ್ಯಕ್ತ ಪಡಿಸಿದಳು. ಭೂದೇವಿ ಕಂಪನಗೊಂಡಳು. ಶಾಲೆಯ ಗೋಡೆ ಕತ್ತರಿಸಿ ಬಿದ್ದವು. ಕಲ್ಲುಗಳು ಉರುಳಿದವು. ಕವಾಟಿಗೆ ಗೆದ್ದಲಿ ಹತ್ತಿದವು. ನೆಲ ಬೀಡು ಬಿಟ್ಟಿತು !

ಇಗೋ, ಗಿಡ ಒಣಗಿವೆ. ಹಕ್ಕಿ ಹಾರಿ ಹೋಗಿವೆ. ನೀರಿನೊರತೆ ಹುಗಿದು ಹೋಗಿದೆ.

ಇದೇನು ' ಸುಂಯ್ ' ಗುಡುವ ಗಾಳಿ ? ಏನು ರೋದನ ? ಹೋ ! ಶಾಲೆಯ ಗೋಡೆಯಿಂದ ಉದುರಿ ಬಿದ್ದ ಕಲ್ಲುಗಳು ಅಳತೊಡಗಿವೆಯಲ್ಲ ! ರೋದನದೊಂದಿಗೆ ಬರುವ ಸೊಲ್ಲೇನಿದು ?

"ಏ, ಮನುಜ, ಕಲ್ಲುಗಳಿಗೆ ಹೃದಯವುಂಟು. ನೀನು ಭಾವಿಸಿದ ಹಾಗೆ ನಾವು ಕಲ್ಲಲ್ಲ. ನಿನ್ನಷ್ಟು ನಿರ್ದಯಿ ನಾವಲ್ಲ. ನಿನ್ನ ದುಃಖ ಕ್ಷಣಿಕ; ಇದ್ದಷ್ಟೂ ಬರಿ ನಟನೆ. ಪೃಥಿವಿ ಹುಟ್ಟಿದಂದಿನಿಂದ ಈ ವರೆಗೂ ನೀನು ಗೆಯ್ಯುತ್ತ ಬಂದಿರುವ ಅನ್ಯಾಯ ನೋಡುತ್ತ ಬಂದಿದೇವೆ. ನಿನ್ನ ಕೃತ್ರಿಮ ಜೀವನ, ಕಾಠಿಣ್ಯ ಹೃದಯ ನೋಡಲಾರದೆ ನಾವು ಕಲ್ಲುಗಳಾಗಿ ಬದುಕಿದೇವೆ. ಮನುಜನಾಗಿ ನಾವೂ ಜನ್ಮ ತಾಳಿ ಬರಬಹುದಿತ್ತು. ಆದರೆ ಅದನ್ನು ಯಾವ ಮಣ್ಣಿಗೆ ಬೇಡಿಕೊಳ್ಳೋಣ........"

ಏನಿದು ವಾರ್ತೆ ? ಕಲ್ಲುಗಳೂ ಕಂಬನಿ ಗರೆಯುತ್ತಿವೆಯಲ್ಲ !

ಕಲ್ಲಿನಂತಹ ಹೃದಯ ನನಗಿಲ್ಲ. ಇದ್ದಿದ್ದರೆ ಈ ಹಾಳು ಬಿದ್ದ ಶಾಲೆಯ ಹತ್ತಿರ ನಿಂತುಗೊಂಡು ಇನ್ನೂ ಮಾತನಾಡುತ್ತಿದ್ದೆ. ಅಣ್ಣಾ, ಹೋಗಿ ಬರುತ್ತೇನೆ; ವಿಶ್ವಾಸವಿರಲಿ.

---

# ತಾಯೀ, ನಮಸ್ಕಾರ!

ನೇಸರು ಆಗಸದಲ್ಲಿ ಮೂರು ಪಾಲು ದಾರಿ ತುಳಿದು ಬಂದಿದ್ದ. ಊರ ಕಡೆ ಮುಖವಾಗಿ ಸಾಗಿದ್ದ ನಾನೂ ಮೂರು ಪಾಲು ದಾರಿ ನಡೆದು ಬಂದಿದ್ದೆ. ಇನ್ನು ನಾಲ್ಕು ಫರ್ಲಾಂಗು ನಾಗಿ ಬಂದರೆ ಮನೆ. ಇದಿರಿನಲ್ಲಿ ತಮ್ಮಂದಿರು— ಸಿದ್ದ, ಶಂಕರ, ಶೇಖರ, ಪಾರ್ವತಿ. ಮಗಳಿಗೆ ಮದುವೆ ಮಾಡುವುದನ್ನು ಬಿಟ್ಟು ತಂಗಿ ಓಡಿ ಬರುತ್ತಾಳೆ. ಗುಬ್ಬಚ್ಚೀ ಗೂಡು ಕಟ್ಟುವುದನ್ನು ಬಿಟ್ಟು ಸಿದ್ದ ಶಂಕರ ಚಪ್ಪಾಳೆಯಿಕ್ಕುತ್ತ ನೆಗೆದು ಬರುತ್ತಾರೆ. ತಾಯ ಮುದ್ದಿಗಾಗಿ ಅಳುತ್ತಿದ್ದ ಶೇಖರ ನನ್ನ ಬರವನ್ನು ಕಂಡು ನೆವವಿಲ್ಲದೆ ನಗುತ್ತಾನೆ. ಸಾಲೆಗೆ ಹೋದ ತಮ್ಮಂದಿರಿಬ್ಬರು ಪಾಠ ಬಿಟ್ಟು ಮನೆಗೆ ಧಾವಿಸಿ ಬರುತ್ತಾರೆ. ಸರಿ. ಎಲ್ಲರನ್ನೂ ಸುತ್ತುಹಾಕಿಕೊಂಡು ನಗರ ವಾಸದ ಅನುಭವಗಳನ್ನು ಹೇಳಿ ಕಣ್ಣು ಬಿಡುವಂತೆ ಮಾಡಿಬಿಡುತ್ತೇನೆ. ಮುಗಿಲೆತ್ತರ ಮುಟ್ಟುವ ಆ ಮಹಲಿನ ಮನೆಗಳು, ಸುಳುಹು - ಹೊಳಹಿನೊಂದಿಗೆ ಮೆರೆಯುವ ಆ ಸಿನಿಮಾ ಮಂದಿರಗಳು, ಆ ಭವ್ಯ ಗೋಪುರದ ಗಡಿಯಾರ.... ಅಬ್ಬಾ! ಹಳ್ಳಿಯ ಹುಡುಗರು ಇದನ್ನೆಲ್ಲ ಬಾಯಿ ತೆರೆದು ನೋಡಬೇಕು; ಎವೆ ಮುಚ್ಚದೆ ಅವಲೋಕಿಸಬೇಕು. ನನ್ನ ತಮ್ಮಂದಿರಿಗೆ ಇದನ್ನೆಲ್ಲ ಬಣ್ಣಿಸಿ ಬೆರಗುಗೊಳಿಸಿ ಬಿಡುತ್ತೇನೆ. ಇಂತು ವಿಚಾರ ತಲೆ ತುಂಬ ಹರಡಿದುವು. ಮೇಲೆ ಮುಖವೆತ್ತಿ ನೋಡಿದೆ. ಅತ್ತಿತ್ತ ಹೊರಳಿ ನೋಡಿದೆ.

ತಂಪು ಗಾಳಿ ಚಲಿಸಿತು. ಹಕ್ಕಿಗಳು ತೋರಣಗಟ್ಟಿದುವು. ಮೋಡಗಳು ಕವಿದು ಬಂದುವು. ಬಿಸಿಗದಿರ ಸುಯ್ಗುರಿದನು. ಕ್ಷಣ ಹೊತ್ತಿನಲ್ಲಿ ಸಂಜೆ ಬಂದಂತಾಯಿತು. ಆಲಿ ಕಲ್ಲುಗಳು ಮುತ್ತುದುರಿದಂತೆ ಉದುರ ಹತ್ತಿದುವು. ಓಡಿ ಬಂದು ಅಗಸೆಯ ಬಾಗಿಲಿಗೆ ಮುಟ್ಟಿದೆ.

ಊರ ಮುಂದಿನ ಬಾವಿಯ ಕಟ್ಟೆ ಜನವಿಹೀನವಾಗಿತ್ತು. ಕುಂಬಾರ ಆವಿಗೆಯ ಹತ್ತಿರ ಮಾತ್ರ ಎಳೆಯನೊಬ್ಬ ಏನೊ ಕಾರ್ಯ ತತ್ಪರನಾಗಿದ್ದ. ಮಳೆ ಬೀಳುತ್ತಿತ್ತು. ಆಲಿ ಕಲ್ಲುಗಳು ಸುರಿಯುತ್ತಿದ್ದುವು. ಆದರೂ ಆತನಿಗೆ ಎಚ್ಚರ

ಇರಲಿಲ್ಲ. ಅವನು ಯಾರೆಂಬುದನ್ನು ತಿಳಿಯಲು ಹತ್ತಿರ ಹೋದೆ. ನಾನು ಬಂದುದೂ ಆತನಿಗೆ ಅರಿವಿರಲಿಲ್ಲ.

' ಏನಿದು ಸಿದ್ದ ? ಏನು ಮಾಡುತ್ತಿದ್ದೀಯೆ ? '

ತಮ್ಮ ಮುಖ ಮೇಲಕ್ಕೆತ್ತಿದ. ಒಮ್ಮೆ ಬೆದರಿದ. ಇನ್ನೊಮ್ಮೆ ನಡು ಗಿದ. ಮತ್ತೊಮ್ಮೆ ಕಣ್ಣೀರು ಸುರಿಸಿದ.

ಹಾಯಾಗಿ ಅವನನ್ನು ಎತ್ತಿಕೊಂಡೆ. ಆತನ ಜೇಬಿನಲ್ಲಿ ಆಲಿ ಕಲ್ಲು ಗಳು ತುಂಬಿದ್ದುವು. ಒಂದೊಂದರಂತೆ ಅವು ಕರಗಿ ಮೈಯನ್ನೆಲ್ಲ ತೇವ ಮಾಡುತ್ತಿದ್ದುವು. ತಮ್ಮನನ್ನು ಎದೆಗವಚಿಕೊಂಡು ಮನೆಗೆ ನಡೆದೆ.

ಬಾಗಿಲ ಬಳಿ ತಾಯಿ ನಿಂತುಕೊಂಡು ಸಿದ್ದನನ್ನು ಕೂಗಿ ಕೂಗಿ ಕರೆ ಯುತ್ತಿದ್ದರು. ನಾನು ಬಂದುದನ್ನು ಕಂಡು ತಾಯಿ ತಬ್ಬಿಬ್ಬಾದರು. ಎದೆಗೆ ತಮ್ಮ ಇದ್ದುದನ್ನು ನೋಡಿ ಬೆಚ್ಚಿದರು.

' ಏನಿದು ಅವ್ವ ? ಸಿದ್ದನ ಜೇಬು ನೋಡು ! '

ತಾಯಿ ನೋಡಿದರು. ಹೆನಿಗಣ್ಣಿನಿಂದ ಅವನಿಗೆ ಬಟ್ಟೆ ಉಡಿಸಿದರು. ರಾತ್ರಿ ಸಿದ್ದನಿಗೆ ನಾನು ಬಂದುದು ಅರಿವಿರಲಿಲ್ಲ. ನಾನು ಕರೆದರೆ ' ಓ ' ಗೊಡಲಿಲ್ಲ.

ಮೈ ತುಂಬ ಉಗಿ ಹೊಮ್ಮುತ್ತಿತ್ತು. ಆಲಿಕಲ್ಲು ಕರಗಿದಾಗ ಆದ ತಂಪಿಗೂ ಈಗಿನ ಮೈಯ ಕಾವಿಗೂ ನೆಲ ಬಾನಿನಷ್ಟು ಅಂತರ ! ಸಿದ್ದಾ....?

ದಿನಗಳು ಒಂದರಂತೆ ಒಂದು ಉರುಳಿ ಇಪ್ಪತ್ತೊಂದು ದಿನಗಳು ಸಾಗಿದುವು.

ಸಿದ್ದನಿಗೆ ಎಚ್ಚರಾಗಲಿಲ್ಲ. ತಮ್ಮಂದಿರೊಡನೆ ಕೂಡಿ ಮಾತನಾಡುವು ದಾಗಲಿಲ್ಲ. ಇಪ್ಪತ್ತೆರಡನೆಯ ದಿನ ರಾತ್ರಿ ಎಂಟು ಘಂಟೆಗೆ ಸಿದ್ದ ಆಲಿಕಲ್ಲಿ ನಂತೆ ತಂಪಾಗಿ ಬಿಟ್ಟ.

ಈ ಸಂಗತಿ ನಡೆದು ಹೋಗಿ ಈಗ ಎಂಟು ವರುಷಗಳಾದುವು. ಎಂಟು ವರುಷಗಳ ಮೇಲೆ ಮತ್ತೊಮ್ಮೆ ಊರಿಗೆ ಹೋದೆ.

ಊರ ಬಳಿಯಲ್ಲಿ ಬಂದಿದ್ದೆ. ಆ ಸನ್ನಿವೇಶ ನೆನಪಾಯಿತು. ಆಗಿನ ತಮ್ಮಂದಿರು ಒಬ್ಬರೂ ಇಲ್ಲ. ಮನೆಯಲ್ಲಿ ಹೋಗಿ ಯಾರೊಡನೆ ಕತೆ ಹೇಳಲಿ! ಕಂಬದ ನೆರಳಿನೊಡನೆ ಮಾತನಾಡಲಿ? ಉರಿಯುವ ಒಲೆಯೊಡನೆ ನುಡಿಯಲೆ? ಶಿವು, ಸಿದ್ದ, ಶಂಕರ, ಶೇಖರ, ಪಾರ್ವತಿ— ಎಲ್ಲರೂ ಮಣ್ಣಿನಲ್ಲಿ ಮಣ್ಣಾಗಿ ಹೋಗಿದ್ದಾರೆ!

ಬಾವಿಯ ಕಟ್ಟೆಯ ಬಳಿ ಬಂದೆ. ನೀರಿನಲ್ಲಿ ಮುಖವಿಟ್ಟು ನೋಡಿದೆ. 'ನಾನೂ ಬರಲೇ?' ಎಂದೆ.

'ಈಗ ಬೇಡ. ಕಾಲ ಬರಲಿದೆ!' ಎಂಬ ಮಾರ್ದನಿ ಬಂದಿತು. ತಿರುಗಿ ಮನೆಯ ಕಡೆ ನಡೆದೆ. ಕಣ್ಣಿನಲ್ಲಿ ಉಪ್ಪು ನೀರು ತುಂಬಿ ಬಂದಿತ್ತು.

ಆಗ ಇದಿರಿನಲ್ಲಿ ತಮ್ಮಂದಿರೆಲ್ಲರೂ ಓಡಿ ಬಂದು ನಿಂತಂತಾಯಿತು.

ಆನಂದ ಹೆಚ್ಚಾಯಿತು. ಭೂದೇವಿಗೆ ನಮಸ್ಕಾರ ಮಾಡಿದೆ. 'ತಾಯೀ, ನಮಸ್ಕಾರ!' ಎಂದು ಹಣೆ ಹಚ್ಚಿದೆ.

ಆ ಹೊತ್ತಿಗೆ ಎರಡು ಹನಿ ಕಣ್ಣೀರು ಪಳಕ್ಕನೆ ಉಚ್ಚಿ ನೆಲದ ಮೇಲೆ ಬಿದ್ದು ಇಂಗಿ ಹೋದವು!

---

●

## ಮುದ್ರಣ ಕಾದಿರುವ ಇದೇ ಲೇಖಕರ ಇತರ ಕೃತಿಗಳು.

ರಾಜಾರಾಣಿ ದೇಖೋ ! .... .... ....
( ಪ್ರಬಂಧ ಸಂಕಲನ )

ಕಾಡ ಮಲ್ಲಿಗೆ .... .... .... ....
( ಸಣ್ಣ ಕತೆಗಳ ಸಂಗ್ರಹ )

ತೋರಣ .... .... .... ....
( ವ್ಯಕ್ತಿ ಚಿತ್ರಗಳು )

ಕನ್ನಡ ತಾಯ್ ನೋಟ .... .... ....
( ಕನ್ನಡ ಸಾಹಿತ್ಯಕ್ಕೆ ಹೆಣ್ಣು ಮಕ್ಕಳು ಸಲ್ಲಿಸಿದ ಸೇವೆ )

ರವೀಂದ್ರನಾಥ ಟಾಗೋರ್ .... .... ....
( ಕವಿವರರ ಕಾವ್ಯ, ಜೀವನದ ಅಭ್ಯಾಸ )

